KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೮, ೨೦೦೯ (ಆಶ್ವಯುಜ ೧೬, ಶಕ ವರ್ಷ ೧೯೩೧) | ಸಂಚಿಕೆ ೪೦ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:141:09/627, ದಿನಾಂಕ:28ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಕೌಸರ್ ಗಂ:ಲೇಟ್ ಹೊನ್ನೂರ್‌ವಲಿ, ವಯಸ್ಸು:23 ವರ್ಷ (ಮೃತನ ಹೆಂಡತಿ)<br>2) ಶ್ರೀಮತಿ ಫಾತಿಮ ಗಂ: ಹೊನ್ನೂರ ಸಾಬ್ ವಯಸ್ಸು:55 ವರ್ಷ, (ಮೃತನ ತಾಯಿ)<br>3) ಶ್ರೀ ಷಾಹಿನ್ ತಂ: ಲೇಟ್ ಹೊನ್ನೂರ್ ಸಾಬ್, ವಯಸ್ಸು:14 ವರ್ಷ (ಮೃತನ ಸಹೋದರಿ)<br>ಎಲ್ಲರ ವಾಸ: ಕೋನಸಾಗರ ಗ್ರಾಮ, ಮೊಣಕಾಲ್ಮೂರು (ತಾ) ಚಿತ್ರದುರ್ಗ ಜಿಲ್ಲೆ, ಹಾಲಿವಾಸ, ರೂಪನಗುಡಿ ರಸ್ತೆ, ಬಳ್ಳಾರಿ. | **ವಿರುದ್ಧ** | 1) ಬಿ.ಎಸ್. ನೂರ್ ಮಹಮ್ಮದ್ ತಂ: ಸಯ್ಯದ್ ಮೆಹಬೂಬ್, ಟ್ರ್ಯಾಕ್ಟರ್ ಮಾಲೀಕರು ವಾಹನ ಸಂಖ್ಯೆ:ಎಪಿ–02:ಯು:3944 ಚಿತ್ತವಾಡಿಗ, ಹೊಸಪೇಟೆ (ತಾ) ಬಳ್ಳಾರಿ (ಜಿ)<br>2) ಶ್ರೀಮತಿ ಜಯಲಕ್ಷ್ಮಿ ಗಂ: ಹೊನ್ನೂರಪ್ಪ ಟ್ರೈಲರ್, ನಂ.ಕೆಎ–16:2126ರ ಮಾಲೀಕರು ಅಂದ್ರಾಳ್ ಪೋಸ್ಟ್, ಬಳ್ಳಾರಿ ಪ್ರಸ್ತುತ ಶಾಧಿಮಹಲ್, ಹೊಸಪೇಟೆ.<br>3) ವಿಭಾಗೀಯ ವ್ಯವಸ್ಥಾಪಕರು, ಮೆ: ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ., ಬಳ್ಳಾರಿ.<br>4) ವಿಭಾಗೀಯ ವ್ಯವಸ್ಥಾಪಕರು, ಐಸಿಐಸಿಐ ಲೋಂಬೋರ್ಡ್ ಮೋಟಾರ್ ಇನ್ಸೂರೆನ್ಸ್, ಡಬಲ್‌ರೋಡ್, ಬಳ್ಳಾರಿ. |

**ಪ್ರಕಟಣೆ**

ಸದರಿ 1 ರಿಂದ 3ನೇ ಅರ್ಜಿದಾರರೆಲ್ಲರೂ ಮೃತ ಹೊನ್ನೂರವಲಿಗೆ ಹೆಂಡತಿ, ತಾಯಿ ಹಾಗೂ ಸಹೋದರಿಯಾಗಬೇಕೆಂದು, ವಾರಸುದಾರರು ಹಾಗೂ ಅವಲಂಬಿತರೆಂದು ತಿಳಿಸಿ ಸದರಿ ಮೃತನು 23.05.2009ರಂದು ಟ್ರಾಕ್ಟರ್ ಟ್ರೈಲರ್ ವಾಹನ ಸಂಖ್ಯೆ: ಎಪಿ–02:ಯು–3944 ಮತ್ತು ಕೆಎ–16:2126ರಲ್ಲಿ ಚಾಲಕನಾಗಿ ಕೆಲಸ ಮಾಡುತ್ತಿದ್ದಾಗ ಅಪಘಾತ ಸಂಭವಿಸಿ ತೀವ್ರ ಗಾಯಗೊಂಡು ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು, ಮೃತನು 24 ವರ್ಷದವನಿದ್ದು ತಿಂಗಳಿಗೆ 5000–00 ರೂ.ಗಳನ್ನು ಪ್ರತಿವಾದಿಗಳಿಂದ ಪಡೆಯುತ್ತಿದ್ದನೆಂದು, ಈಗ ಆತನ ಮರಣದಿಂದ ತಮ್ಮ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು ತಿಳಿಸಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಬೇರೆ ಯಾರಾದರೂ ಮೃತನ ಅವಲಂಬಿತರು, ವಾರಸುದಾರರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂತಹವರು ಕರ್ನಾಟಕ ರಾಜ್ಯಪತ್ರದಲ್ಲಿ, ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಅಂತಹವರು ಆಕ್ಷೇಪಣೆಗಳನ್ನು ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:209:09/625, ದಿನಾಂಕ:28ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ವೈಜಯಂತಿ ದೇವಿ, ಗಂ: ಸತೇಂದ್ರಸಿಂಗ್, ವಯಸ್ಸು:50 ವರ್ಷ, ವೃತ್ತಿ: ಏನೂ ಇಲ್ಲ, (ಮೃತನ ತಂದೆ)<br>2) ಶ್ರೀ ಸತೇಂದ್ರ ಸಿಂಗ್ ತಂ: ಪರಮೇಶ್ವರ ಸಿಂಗ್, ವಯಸ್ಸು: 55ವರ್ಷ, ವೃತ್ತಿ: ಏನೂ ಇಲ್ಲ, (ಮೃತನ ತಾಯಿ) ಈರ್ವರ ವಾಸ: ಸಣಸಿಗ್ರಾಮ, ಔರಂಗಾಬಾದ್, ಪ್ರಸ್ತುತ ವಾಸ: ಕುಡಿತಿನಿ ಗ್ರಾಮ, ಬಳ್ಳಾರಿ ಜಿಲ್ಲೆ. | **ವಿರುದ್ಧ** | 1) ದಿ ಮ್ಯಾನೇಜಿಂಗ್ ಡೈರೆಕ್ಟರ್, ಮೆ: ಪವಮಾನ ಇಸ್ಪಾಟ್ ಪ್ರೈ.ಲಿ., ತಿಮ್ಮಲಾಪುರ ರಸ್ತೆ, ಕುಡಿತಿನಿ ಗ್ರಾಮ, ಬಳ್ಳಾರಿ (ತಾ) (ಜಿ).<br>2) ದಿ ಡಿವಿಜನಲ್ ಮ್ಯಾನೇಜರ್ ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

1ನೇ ಅರ್ಜಿದಾರಳು ವೈಜಯಂತಿ ದೇವಿ, 2ನೇ ಅರ್ಜಿದಾರ ಸತೇಂದ್ರಸಿಂಗ್ ಇವರು ರಾಹುಲ್‌ಸಿಂಗ್‌ನ ತಂದೆ–ತಾಯಿಗಳೆಂದು, ಶಾಸನಬದ್ಧ ವಾರಸುದಾರರು ಹಾಗೂ ಅವಲಂಬಿತರೆಂದು ತಿಳಿಸುತ್ತಾ ರಾಹುಲ್‌ಸಿಂಗ್‌ನು ದಿನಾಂಕ:01.04.2009 ರಂದು ಕರ್ತವ್ಯದ ಮೇಲಿದ್ದಾಗ ಅಪಘಾತ ಸಂಭವಿಸಿ 22 ಅಡಿ ಎತ್ತರದಿಂದ ಕೆಳಗೆ ಬಿದ್ದು ತೀವ್ರ ಗಾಯಗೊಂಡಿದ್ದು ಕೂಡಲೇ ದಾನಮ್ಮ ಆಸ್ಪತ್ರೆ, ಬಳ್ಳಾರಿಯಲ್ಲಿ ತುರ್ತು ಚಿಕಿತ್ಸೆ ಪಡೆದು ಅವರ ಸಲಹೆ ಮೇರೆಗೆ ಬೆಂಗಳೂರು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತಿದ್ದಾಗ ಮೃತಪಟ್ಟಿರುತ್ತಾನೆಂದು, ಮೃತನಿಗೆ 1ನೇ ಪ್ರತಿವಾದಿ ತಿಂಗಳಿಗೆ 4000–00 ರೂ. ಕೊಡುತ್ತಿದ್ದರೆಂದು ಈಗ ಆತನು ಇಲ್ಲದೆ ತಮ್ಮಗಳ ಜೀವನ ಕಷ್ಟಕರವಾಗಿರುತ್ತದೆಂದು ತಿಳಿಸಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೆ ಹಾಗೂ ಸಂಬಂಧೀಕರಿಗೆ ತಿಳಿಸುವುದೇನೆಂದರೆ ಸದರಿ ಮೃತನ ಸಂಬಂಧೀಕರು, ವಾರಸುದಾರರೆಂದು ಯಾರಾದರೂ ಪರಿಗಣಿಸಬೇಕೆಂದಲ್ಲಿ ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ, ಕರ್ನಾಟಕ ರಾಜ್ಯ ಸರ್ಕಾರ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:215:09/623–24, ದಿನಾಂಕ:28ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಸುಜಾತ, ಗಂ:ಲೇಟ್ ಮಲ್ಲಿ ಅಲಿಯಾಸ್ ಮಲ್ಲಿಕಾರ್ಜುನ, ವಯಸ್ಸು:20 ವರ್ಷ, ವೃತ್ತಿ: ಗೃಹಿಣಿ (ಮೃತನ ಹೆಂಡತಿ)<br>2) ಮೈನರ್ ಕೃಷ್ಣ ತಂ: ಲೇಟ್ ಮಲ್ಲಿ ಅಲಿಯಾಸ್ ಮಲ್ಲಿಕಾರ್ಜುನ, ವಯಸ್ಸು:01 ವರ್ಷ, (ಮೃತನ ಮಗ)<br>3) ಶ್ರೀ ಹನುಮಂತ ತಂ:ಸಿದ್ದಪ್ಪ, ವಯಸ್ಸು:50 ವರ್ಷ, ವೃತ್ತಿ: ಏನೂ ಇಲ್ಲ, (ಮೃತನ ತಂದೆ)<br>4) ಶ್ರೀಮತಿ ಪಾರ್ವತಿ ಗಂ: ಹನುಮಂತ, ವಯಸ್ಸು: 45 ವರ್ಷ, ವೃತ್ತಿ: ಗೃಹಿಣಿ (ಮೃತನ ತಾಯಿ)<br>ಎಲ್ಲರವಾಸ: ಶಾತವಾಹನ ಫ್ಯಾಕ್ಟರಿರಸ್ತೆ, ಬೊಮ್ಮನಹಾಳ ಗ್ರಾಮ, ರಾಯದುರ್ಗ (ತಾ) ಅನಂತಪುರ (ಜಿ). | **ವಿರುದ್ಧ** | 1) ಶಿವರುದ್ರಗೌಡ ತಂ:ಶಿವಪ್ಪಗೌಡ, ಟ್ರಾಕ್ಟರ್ ಟ್ರೈಲರ್ ಮಾಲೀಕರು, ವಾಹನ ಸಂಖ್ಯೆ: ಎಪಿ–02:ಜಿ–3934, ಬೊಮ್ಮನಹಾಳ ಗ್ರಾಮ, ರಾಯದುರ್ಗ (ತಾ) ಅನಂತಪುರ ಜಿಲ್ಲೆ (ಎ.ಪಿ.)<br>2) ವಿಭಾಗೀಯ ವ್ಯವಸ್ಥಾಪಕರು, ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಳ್ಳಾರಿ. |

**ಪ್ರಕಟಣೆ**

ಶ್ರೀಮತಿ ಸುಜಾತ ಗಂ:ಲೇಟ್ ಮಲ್ಲಿ ಅಲಿಯಾಸ್ ಮಲ್ಲಿಕಾರ್ಜುನ, 2ನೇ ಅರ್ಜಿದಾರ ಮೈನರ್ ಕೃಷ್ಣ, 3 ಮತ್ತು 4ನೇ ಅರ್ಜಿದಾರರಾದ ಹನುಮಂತ, ಶ್ರೀಮತಿ ಪಾರ್ವತಿ ಇವರುಗಳು ತಾವು ಮೃತ ಮಲ್ಲಿ ಅಲಿಯಾಸ್ ಮಲ್ಲಿಕಾರ್ಜುನನ ಶಾಸನಬದ್ಧ ವಾರಸುದಾರರು, ಅವಲಂಬಿತರು ಹಾಗೂ ಹೆಂಡತಿ, ಮಕ್ಕಳು ತಂದೆ–ತಾಯಿಗಳಾಗಬೇಕೆಂದು, ಮೃತ ಮಲ್ಲಿ ಅಲಿಯಾಸ್ ಮಲ್ಲಿಕಾರ್ಜುನ ದಿನಾಂಕ:04.04.2009ರಂದು 1ನೇ ಪ್ರತಿವಾದಿಗಳಲ್ಲಿ ಕೂಲಿಯಾಗಿ ಕೆಲಸ ಮಾಡುತ್ತಿದ್ದಾಗ ವಿದ್ಯುತ್ ಕಂಬದ ವೈಯರ್ ಬಡಿದು ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು, ಅಪಘಾತಪೂರ್ವದಲ್ಲಿ ಆತನು ಆರೋಗ್ಯವಾಗಿದ್ದು, 25 ವರ್ಷದವನಿದ್ದು, ತಿಂಗಳಿಗೆ ವೇತನ 5000–00 ರೂ. ಪಡೆಯುತ್ತಿದ್ದು ತನ್ನ ಹಾಗೂ ನಮ್ಮಗಳ ಜೀವನ ನಿರ್ವಹಣೆ ಮಾಡುತ್ತಿದ್ದನು. ಈಗ ಆತನಿಲ್ಲದೆ ತಮ್ಮಗಳ ಜೀವನ ಸಾಗುವುದು ತುಂಬಾ ಕಷ್ಟಕರವೆಂದು ತಿಳಿಸಿ ನಷ್ಟ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ಸಂಬಂಧವಾಗಿ ಯಾರಾದರೂ ವಾರಸುದಾರರು, ಅವಲಂಬಿತರೆಂದು ಪರಿಗಣಿಸಬೇಕೆಂದು ಕೋರಿ ಆಕ್ಷೇಪಣೆ ಸಲ್ಲಿಸುವುದಾದರೆ ಅಂತಹವರು ಈ ನ್ಯಾಯಾಲಯದ ನಾಮಫಲಕದಲ್ಲಿ, ಕರ್ನಾಟಕ ರಾಜ್ಯ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಸಲ್ಲಿಸತಕ್ಕದ್ದು. ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್.833

ಕಾರ್ಮಿಕಾಧಿಕಾರಿ ಮತ್ತು ಕಾರ್ಮಿಕ ನಷ್ಟಪರಿಹಾರ
ಆಯುಕ್ತರು, ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2,**
**ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–105:2009, ದಿನಾಂಕ:12ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀ ಸೋಮನಾಥ ತಂದೆ ಬಸವಂತ ಕೋಳಿ ಮತ್ತು ಇನ್ನೊಬ್ಬರು, ತಾ:ಬ.ಬಾಗೇವಾಡಿ, ಜಿಲ್ಲೆ: ಬಿಜಾಪುರ. | **ವಿರುದ್ಧ** | 1) ಶ್ರೀ ರೈಸ ಇಬ್ರಾಹಿಂ ಬಿರಾಜದಾರ, ಸಾ:ಕುಡಲ, ಪೋಸ್ಟ್ ಬನ್ನೂರ, ಜಿಲ್ಲೆ: ಸೊಲಾಪುರ.<br>2) ದಿ ಮ್ಯಾನೇಜರ್, ರಿಪ್ರೆಸೆಂಟೆಡ್‌ಬಾಯ ಶ್ರೀ ರಾಮ ಟ್ರಾನ್ಸ್‌ಪೋರ್ಟ್ ಫೈನಾನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಈರಣ್ಣ ತಂದೆ ಸೋಮನಾಥ ಕೋಳಿ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:08.06.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ–2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2,**
**ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–109:2009, ದಿನಾಂಕ:17ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಶಖೀಲಾ ಗಂಡ ರಫೀಕ್ ಅಹ್ಮದ ಜಮಾದಾರ ಮತ್ತು ಇತರರು, ಸಾ: ಮಿರಡೆಗಲ್ಲಿ, ಬಿಜಾಪುರ ಮತ್ತು ಇತರರು. | **ವಿರುದ್ಧ** | 1) ಶ್ರೀ ಗಿರೀಶ ತಂದೆ ಈರಪ್ಪ ಸುರಪುರ, ಸಾ:ಸುರಪುರ ಬಿಲ್ಡಿಂಗ್, ನಾಲಬಂದ ಚೌಕ್, ಬಿಜಾಪುರ.<br>2) ದಿ ಡಿವಿಜನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ರಫಿಕ್ ಅಹ್ಮದ ತಂದೆ ಜಂಗ್ಲಿಸಾಬ ಜಮಾದಾರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:02.08.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ–2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–110:2009, ದಿನಾಂಕ:18ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಶಂಕ್ರವ್ವ ಗಂಡ ಶ್ರೀಮಂತ ಕೆಂಗನಾಳ ಸಾ: ಶಿಕಾರಖಾನಾ, ಬಿಜಾಪುರ ಮತ್ತು ಇತರರು. | **ವಿರುದ್ಧ** | 1) ಶ್ರೀ ಮಲ್ಲಿಕಾರ್ಜುನ ತಂದೆ ಚಂದ್ರಶೇಖರ ಕೆಂಗನಾಳ, ಸಾ: ಹೊನ್ನಳ್ಳಿ, ತಾ: ಇಂಡಿ, ಜಿಲ್ಲೆ: ಬಿಜಾಪುರ.<br>2) ದಿ ಮ್ಯಾನೇಜರ್, ಲಿಗಲ್ ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ–01. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಶ್ರೀಮಂತಭೀಮರಾಯ ಕೆಂಗನಾಳ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:24.06.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಪಿ.ಆರ್.838
ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ–2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಿಜಾಪುರ ಜಿಲ್ಲೆ, ಬಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್‌ಆರ್–111:2009, ದಿನಾಂಕ:19ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ದೊಮನಿ ದೇವಿ ಗಂಡ: ಲಾಲನರಾಮ ಉರ್ಫ್ ಬಚ್ಚು ರಬಿದಾಸ ಮತ್ತು ಇತರರು, ಸಾ: ಸೈದಾಪುರ ಮಕದುಮಬಾಬಾ, ಪಿ.ಎಸ್. ಪಾರಸಿ, ಜಿಲ್ಲೆ: ಅರವಾಲ. | **ವಿರುದ್ಧ** | 1) ದಿ ಮ್ಯಾನೇಜಿಂಗ್ ಡೈರೆಕ್ಟರ್, ಧುಧ ಪಂಡರಿ ಕ್ಯಾಟಲ್ ಫೀಡ ಪಾರ್ಕ್, ಬಾರಸಿ ಜಾಮಗಾಂವ ಬಾರಸಿ ರೋಡ್, ಜಿಲ್ಲೆ: ಸೋಲಾಪುರ. |

2) ದಿ ಮ್ಯಾನೇಜಿಂಗ್ ಡೈರೆಕ್ಟರ್, ಸೋಲಾಪುರ ಜಿಲ್ಲೆ, ಸಹಕಾರಿ ಧೂಡ ಉತ್ಪಾದಕ ಮತ್ತು ಪ್ರಕ್ರಿಯಾ ಸಂಘ ಲಿ., ಸೋಲಾಪುರ.

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಲಾಲನರಾಮ ಉರ್ಫ್ ಬಚ್ಚು ರಬಿದಾಸ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:02.06.2006 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-II, ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್-113:09, ದಿನಾಂಕ:28ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀಮತಿ ಶರಣವ್ವ ಗಂಡ ದೇವಲಪ್ಪ ಹರಿಜನ ಮತ್ತು ಇತರರು, ಸಾ: ಚಿಕಆಸಂಗಿ, ತಾ:ಬ.ಬಾಗೇವಾಡಿ. | **ವಿರುದ್ಧ** | 1) ಶ್ರೀ ಅಸೀಫ್ ಎನ್. ಸೇಟ, ಸಾ: ಮೆ: ಸೇಟ ಟ್ರಾನ್ಸ್‌ಪೋರ್ಟ್, ಕಾರ್ಪೋರೇಷನ ಪಿ.ಬಿ.ರೋಡ್, ಬೆಳಗಾವ. 2) ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪುರ. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ರಾಜೇಶ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:27.05.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ- II,
ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–II,**
**ವಿಜಾಪುರ ಜಿಲ್ಲೆ, ವಿಜಾಪುರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಸ್ಆರ್–116:09, ದಿನಾಂಕ:28ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| ಶ್ರೀ ವೆಂಕಪ್ಪ ತಂದೆ ಸಿರಗಪ್ಪ ಉಪ್ಪಾರ ಮತ್ತು ಇತರರು, ಸಾ: ಸುಗೂರ, ತಾ: ಸುರಪುರ ಜಿಲ್ಲೆ: ಗುಲಬರ್ಗಾ. | **ವಿರುದ್ಧ** | 1) ಶ್ರೀ ಮಹಿಬೂಬಲಿ ತಂದೆ ಅತಾವುಲ್ಲಾ ರಹಿಮಾನ ದಖನಿ, ಸಾ: ಸೋರಾಪುರ, ಜಿಲ್ಲೆ: ಗುಲಬರ್ಗಾ.<br>2) ದಿ ಮ್ಯಾನೇಜರ್, ಲಿಗಲ್ ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂ.ಲಿ., ಬೆಂಗಳೂರು. |

**ಪ್ರಕಟಣೆ**

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ, ಶ್ರೀ ಬಾಲಕೃಷ್ಣ ತಂದೆ ವೆಂಕಪ್ಪ ಉಪ್ಪಾರ ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ:24.07.2009 ರಂದು ಅಪಘಾತಕ್ಕೀಡಾಗಿ ಮೃತನಾಗಿರುತ್ತಾನೆಂದು, ಅಲ್ಲದೇ ತಾವು ಮೃತನ ಅವಲಂಬಿತರಾಗಿರುವುದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ– II,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್.839

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಛೇರಿ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–560 018**

**ಕ್ರ.ಸಂ.ಜೆಆರ್‌ಬಿ:ಎಲ್‌ಕ್ಯೂಡಿ–58–2–ಎಲ್ಎಂಸಿ–07–08, ದಿನಾಂಕ:2ನೇ ಮೇ, 2009**

**ವಿಷಯ:** ಸಮಾಪನೆಗೊಂಡಿರುವ ತುಂಗ ಮೀನುಗಾರರ ಸಹಕಾರ ಸಂಘ ನಿ., ನೆಲ್ಲಿಸರ, ತೀರ್ಥಹಳ್ಳಿ ತಾಲ್ಲೂಕು ಈ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**1) ಈ ಕಛೇರಿಯ ಆದೇಶದ ಸಂಖ್ಯೆ: ಜೆಆರ್‌ಬಿ/ಎಲ್‌ಕ್ಯೂಡಿ/58/2 ಎಲ್ಎಂಸಿ/2007–08, ದಿನಾಂಕ:04.04.2008.

2) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಪತ್ರದ ಸಂಖ್ಯೆ: ಡಿಆರ್‌ಎಸ್/ ಸಮಾಪನೆ/38/2008–09, ದಿನಾಂಕ:21.03.2009.

**ಪ್ರಸ್ತಾವನೆ:**

ತುಂಗ ಮೀನುಗಾರರ ಸಹಕಾರ ಸಂಘ ನಿ., ನೆಲ್ಲಿಸರ, ತೀರ್ಥಹಳ್ಳಿ ತಾಲ್ಲೂಕು ಈ ಸಂಘವು ಸಂಖ್ಯೆ: ಡಿಆರ್‌ಎಸ್/ ನೋಂದಣಿ/32499/2004–05, ದಿನಾಂಕ:22.12.2004 ರಂದು ನೋಂದಣಿಯಾಗಿದ್ದು, ತೀರ್ಥಹಳ್ಳಿ ತಾಲ್ಲೂಕಿಗೆ ಕಾರ್ಯಕ್ಷೇತ್ರವು ಸೀಮಿತವಾಗಿರುತ್ತದೆ. ಈ ಸಂಘವು ನೋಂದಣಿಯಾದ ಉಪನಿಯಮಗಳ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದೆಯೆಂದು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ವರದಿಯ ಮೇರೆಗೆ ಸದರಿ ಸಂಘವನ್ನು ಉಲ್ಲೇಖ (1) ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೊಳಿಸಲಾಗಿತ್ತು.

ಉಲ್ಲೇಖ (2)ರ ಪತ್ರದಲ್ಲಿ ಸಹಕಾರ ಸಂಘಗಳ ಉಪನಿಬಂಧಕರು, ಸಮಾಪನಾಧಿಕಾರಿಯಾದ ತೀರ್ಥಹಳ್ಳಿ ಸಹಕಾರ ಅಭಿವೃದ್ಧಿ ಅಧಿಕಾರಿಯವರು ಅಧಿಕಾರ ವಹಿಸಿಕೊಂಡಿದ್ದು, ಸಮಾಪನಾ ನಡವಳಿಕೆಯನ್ನು ನಿರ್ವಹಿಸುವ ಸಂದರ್ಭದಲ್ಲಿ ಈ ಸಂಘದ ಸದಸ್ಯರು ದಿನಾಂಕ:25.11.2008 ರಂದು ಸಭೆ ಸೇರಿ ಸಂಘವನ್ನು ನಡೆಸಿಕೊಂಡು ಹೋಗಲು ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿರುವುದರಿಂದ ಸಮಾಪನಾಧಿಕಾರಿಯವರು ಅವರ ಕೋರಿಕೆಯನ್ನು ಪರಿಗಣಿಸಿ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಬಗ್ಗೆ ದಿನಾಂಕ:15.01.2009ರಂದು ಸಮಾಪನಾ ನಡವಳಿಯಲ್ಲಿ ತೀರ್ಮಾನಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಉಪನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ತುಂಗಾ ಮೀನುಗಾರರ ಸಹಕಾರ ಸಂಘ ನಿ., ನೆಲ್ಲಿಸರ, ತೀರ್ಥಹಳ್ಳಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಈ ಸಂಘವನ್ನು ಸಮಾಪನೆಗೊಳಿಸಿ ಹೊರಡಿಸಿದ್ದ ಆದೇಶ ಸಂಖ್ಯೆ: ಜೆಆರ್‌ಬಿ/ ಸಮಾಪನೆ/58/2/ಎಲ್ಎಂಸಿ/2007-08, ದಿನಾಂಕ:04.04.2008ನ್ನು ರದ್ದುಪಡಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರು ಸದರಿ ಸಂಘದ ಆಡಳಿತ ಮಂಡಳಿ ರಚನೆಗೆ ಅಗತ್ಯ ಕ್ರಮವಿಡುವುದು ಹಾಗೂ ಚುನಾಯಿತರಾಗುವ ಆಡಳಿತ ಮಂಡಳಿಯು ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಾರಂಭಿಸಿ ಈ ಬಗ್ಗೆ 6 ತಿಂಗಳ ಒಳಗೆ ವರದಿ ನೀಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ದಿನಾಂಕ:02.05.2009ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿ.ಆರ್.429

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕರಾಜ್ಯ, ನಂ.1, ಅಲಿ ಆಸ್ಕರ್ ರಸ್ತೆ, ಬೆಂಗಳೂರು-560 052 ರವರ ನಡವಳಿಗಳು**

**ವಿಷಯ:** ಶ್ರೀಮತಿ ಅಶ್ವಿನಿ ಬಿ.ವಾಡಕರ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿರಸಿ ಉಪವಿಭಾಗ, ಶಿರಸಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಶಿಸ್ತು ಕ್ರಮ-ದಂಡನೆ ವಿಧಿಸುವ ಕುರಿತು.

**ಉಲ್ಲೇಖ:**1) ಸಹಕಾರ ಸಂಘಗಳ ಉಪ ನಿಬಂಧಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ಆದೇಶ ಸಂಖ್ಯೆ: ಡಿಆರ್ಎನ್/ಇಎಸ್‌ಟಿ/ಸಿಆರ್-82/ಇಸಿಸಿ/2004-05, ದಿನಾಂಕ:01.12.2004.

2) ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾವಿ ಪ್ರಾಂತ, ಬೆಳಗಾವಿ ಇವರ ಪತ್ರಸಂಖ್ಯೆ: ಜೆಆರ್ಎಲ್/ಸಿ/197/ಇಸಿಸಿ/2003-04, ದಿನಾಂಕ:24.11.2008.

3) ಇದೇ ಸಮ ಸಂಖ್ಯೆಯ ದಿನಾಂಕ:03.01.2009ರ ಈ ಪ್ರಾಧಿಕಾರದ ತಿಳುವಳಿಕೆ ಪತ್ರ.

4) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿರಸಿ ಉಪವಿಭಾಗ, ಶಿರಸಿ ಇವರ ಪತ್ರ ಸಂಖ್ಯೆ: ಸನಿ-21/ಸಿಬ್ಬಂದಿ/ಇಸಿಸಿ/ಸಿಆರ್-98/2008-09, ದಿನಾಂಕ:23.03.2009.

**ಪ್ರಸ್ತಾವನೆ:**

ಶ್ರೀಮತಿ ಅಶ್ವಿನಿ ಬಿ.ವಾಡಕರ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿರಸಿ ಉಪವಿಭಾಗ, ಶಿರಸಿ ದಿನಾಂಕ:11.08.2003 ರಿಂದ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿ ಉಳಿದ ದುರ್ನಡತೆಗಾಗಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರನ್ವಯ ಮೂಲ ಶಿಸ್ತು ಪ್ರಾಧಿಕಾರವಾಗಿ ಸಹಕಾರ ಸಂಘಗಳ ಉಪನಿಬಂಧಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರು ಉಲ್ಲೇಖ (1)ರನ್ವಯ ಇಲಾಖಾ ವಿಚಾರಣೆಗೆ ಆದೇಶಿಸಿ, ಇವರಿಗೆ ಸೂಕ್ತ ದಂಡನೆ ವಿಧಿಸುವ ಸಲುವಾಗಿ ವಿಚಾರಣಾ ಪ್ರಾಧಿಕಾರದಿಂದ ಪಡೆದ ವಿಚಾರಣಾ ವರದಿಯು ಉಲ್ಲೇಖ (2)ರ ಪತ್ರದ ಮೂಲಕ ಈ ಪ್ರಾಧಿಕಾರಕ್ಕೆ ಸಲ್ಲಿಸಲ್ಪಟ್ಟಿದೆ.

ಆರೋಪಿ ಸರ್ಕಾರಿ ನೌಕರರ ವಿರುದ್ಧ ಶಿಸ್ತು ಪ್ರಾಧಿಕಾರವು ಹೂಡಿದ ಆರೋಪ ಇಂತಿದೆ:

ಶ್ರೀಮತಿ ಅಶ್ವಿನಿ ಬಿ.ವಾಡಕರ, ದ್ವಿತೀಯ ದರ್ಜೆ ಸಹಾಯಕರು ಇವರು ದಿನಾಂಕ:11.08.2003 ರಿಂದ ಅನಧಿಕೃತ ಗೈರು ಹಾಜರಾಗಿರುವ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಶಿಸ್ತಿನ ಕ್ರಮಕ್ಕೆ ಹೊಣೆಗಾರರಾಗಿರುವರು.

ಇಲಾಖಾ ವಿಚಾರಣೆ ನಡೆಸಲು ಮೂಲ ಶಿಸ್ತು ಪ್ರಾಧಿಕಾರವು ನೇಮಕ ಮಾಡಿದ ವಿಚಾರಣಾ ಪ್ರಾಧಿಕಾರವಾದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕಾರವಾರ ಉಪವಿಭಾಗ, ಕಾರವಾರ ಇವರು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ನಡೆಸಿದ ವಿಚಾರಣೆಗೆ ಆರೋಪಿ ಸರ್ಕಾರಿ ನೌಕರರು ಹಾಜರಾಗದೆ ಸತತವಾಗಿ ಗೈರು ಹಾಜರಾದ ಕಾರಣ ಇಲಾಖಾ ವಿಚಾರಣೆಯಲ್ಲಿ ಭಾಗವಹಿಸಲು ಇವರಿಗೆ ಆಸಕ್ತಿ

ಇಲ್ಲವೆಂದು ವಿಚಾರಣಾ ಪ್ರಾಧಿಕಾರವು ಮನಗಂಡು ಇವರ ವಿರುದ್ಧ ಹೂಡಿದ ಆರೋಪವು ಸಾಭೀತಾಗಿರುವುದಾಗಿ ನಿರ್ಣಯಕ್ಕೆ ಬಂದಿರುತ್ತದೆ.

ಆರೋಪಿ ಸರ್ಕಾರಿ ನೌಕರರಾದ ಶ್ರೀಮತಿ ಅಶ್ವಿನಿ ಬಿ.ವಾಡಕರ, ಇವರು ಅನುಕಂಪದ ಆಧಾರದ ಮೇಲೆ ದ್ವಿತೀಯ ದರ್ಜೆ ಸಹಾಯಕರಾಗಿ ನೇಮಕ ಹೊಂದಿ ದಿನಾಂಕ:19.01.2001 ರಿಂದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿರಸಿ ಉಪವಿಭಾಗ, ಶಿರಸಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಇವರ ಪರೀಕ್ಷಾ ಪೂರ್ವ ಅವಧಿ ಘೋಷಿತವಾಗಿರುವುದಿಲ್ಲ. ಇವರು ದಿನಾಂಕ:29.03.2003 ರಿಂದ ದಿನಾಂಕ: 10.08.2003 ರವರೆಗೆ ಪ್ರಸೂತಿ ರಜೆಯ ನಂತರ ದಿನಾಂಕ:11.08.2003 ರಂದು ಕಛೇರಿ ಕೆಲಸಕ್ಕೆ ಹಾಜರಾಗದೆ ಸತತವಾಗಿ ಗೈರು ಹಾಜರಾಗಿ ಉಳಿದಿರುತ್ತಾರೆ. ವಿಚಾರಣಾ ನಡವಳಿಗಳಲ್ಲಿ ಪಾಲ್ಗೊಳ್ಳಲು ವಿಚಾರಣಾ ಪ್ರಾಧಿಕಾರವು ಇವರಿಗೆ ಸಾಕಷ್ಟು ಅವಕಾಶಗಳನ್ನು ನೀಡಿದ್ದರೂ ಸಹ ಇವರು ವಿಚಾರಣೆಗೆ ಹಾಜರಾಗದೆ ಇರುವುದು ಕಂಡುಬಂದಿದೆ. ಇದರಿಂದಾಗಿ ವಿಚಾರಣೆಯಲ್ಲಿ ಭಾಗವಹಿಸಲು ಇವರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಿ ಆರೋಪವು ಸಾಬೀತಾಗಿರುವುದಾಗಿ ವಿಚಾರಣಾ ಪ್ರಾಧಿಕಾರವು ಅನಿವಾರ್ಯವಾಗಿ ಏಕಪಕ್ಷೀಯವಾಗಿ ಕೈಗೊಂಡ ನಿರ್ಣಯವನ್ನು ಸಹಮತಿಸಿದೆ.

ಆರೋಪಿ ಸರ್ಕಾರಿ ನೌಕರರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957 ರನ್ವಯ ಸೂಕ್ತ ದಂಡನೆಯನ್ನು ವಿಧಿಸುವ ಮುನ್ನ ವಿಚಾರಣಾ ವರದಿಯ ಮೇಲೆ ಅಹವಾಲನ್ನು ಪಡೆಯಲು ಉಲ್ಲೇಖ (3)ರ ತಿಳುವಳಿಕೆ ಪತ್ರದೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಇವರಿಗೆ ಒದಗಿಸಿ 15 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು. ಈ ತಿಳುವಳಿಕೆ ಪತ್ರವನ್ನು ಮತ್ತು ವಿಚಾರಣಾ ವರದಿಯ ಪ್ರತಿಯನ್ನು ಆರೋಪಿ ಸರ್ಕಾರಿ ನೌಕರರ ಪರವಾಗಿ ಇವರ ತಾಯಿ ಶ್ರೀಮತಿ ಅಹಲ್ಯ ವಾಡಕರ ಇವರಿಗೆ ದಿನಾಂಕ:19.03.2009ರಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿರಸಿ ಉಪವಿಭಾಗ, ಶಿರಸಿ ಇವರ ಮೂಲಕ ಜಾರಿ ಆಗಿ ಉಲ್ಲೇಖ (4)ರಂತೆ ಸ್ವೀಕೃತಿ ಸಲ್ಲಿಸಲ್ಪಟ್ಟಿದೆ.

ವಿಚಾರಣಾ ವರದಿಯ ಮೇಲೆ ಅಹವಾಲನ್ನು ಲಿಖಿತದಲ್ಲಿ ಸಲ್ಲಿಸಲು ಆರೋಪಿ ಸರ್ಕಾರಿ ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಲಾಗಿದ್ದರೂ ಇವರಿಂದ ಯಾವುದೇ ಅಹವಾಲು ಸ್ವೀಕೃತವಾಗಿರುವುದಿಲ್ಲ. ಆರೋಪಿ ಸರ್ಕಾರಿ ನೌಕರರ ವಿರುದ್ಧ ಹೂಡಿರುವ ಆರೋಪವು ಗಂಭೀರ ಸ್ವರೂಪದ್ದಾಗಿದ್ದು, ಈ ಆರೋಪವು ವಿಚಾರಣೆಯಲ್ಲಿ ಸಾಭೀತಾಗಿರುವುದರಿಂದ ಮತ್ತು ಆರೋಪಿ ಸರ್ಕಾರಿ ನೌಕರರ ತಮ್ಮ ಅಹವಾಲನ್ನು ಸಲ್ಲಿಸಲು ವಿಫಲರಾದ್ದರಿಂದ ಇವರಿಗೆ ಕಠಿಣ ದಂಡನೆ ವಿಧಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಸಿಬ್ಬಂದಿ/23/ಇಸಿಸಿ/2008–09, ದಿನಾಂಕ:19ನೇ ಮೇ, 2009**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 9(2)(ಸಿ) ರಡಿ ಪ್ರದತ್ತವಾದ ಅಧಿಕಾರದನ್ವಯ ಡಿ.ಎನ್. ನಾಯಕ್, ಭಾ.ಆ.ಸೇ. ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ಬೆಂಗಳೂರು ಆದ ನಾನು ಶ್ರೀಮತಿ ಅಶ್ವಿನಿ ಬಿ.ವಾಡಕರ, ದ್ವಿತೀಯ ದರ್ಜೆ ಸಹಾಯಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿರಸಿ ಉಪವಿಭಾಗ, ಶಿರಸಿ ಇವರಿಗೆ ಇದೇ ನಿಯಮಾವಳಿಗಳ ನಿಯಮ 8(vii) ರನ್ವಯ ಸರ್ಕಾರಿ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಿ ಆದೇಶಿಸಿದ್ದೇನೆ. ಗೈರು ಹಾಜರಾಗಿರುವ ಅವಧಿಗೆ ವೇತನ ಪಡೆಯಲು ಅವರು ಅರ್ಹರಿರುವುದಿಲ್ಲವೆಂದು ಕೂಡ ಆದೇಶಿಸಲಾಗಿದೆ.

**ಡಿ.ಎನ್. ನಾಯಕ್**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿ.ಆರ್.454

**ಅರಣ್ಯ ಇಲಾಖೆ**

**ಅರಣ್ಯ ಕ್ಷೇತ್ರ ನಿರ್ಧಾರಾಧಿಕಾರಿಗಳ ಕಾರ್ಯಲಯ ಬಳ್ಳಾರಿ.**

**ಸಂಖ್ಯೆ:ಎಫ್.ಎ.ಎಫ್/ ಎಫ್.ಓ.ಆರ್/ಆರ್.ಇ.ಎಸ್/ಸಿ.ಆರ್/9(ಎ)/86–87, ದಿನಾಂಕ:1ನೇ ಸೆಪ್ಟೆಂಬರ್, 2009**

**(ಫಾರಂ–2–ಕಾಯ್ದೆ 15)**

**ಘೋಷಣೆ**

1963ನೇ ಇಸವಿಯ ಕರ್ನಾಟಕ ಅರಣ್ಯ ಅಧಿನಿಯಮದ (5) ನೇ ಪ್ರಕರಣದ ಮೇರೆಗೆ ಘೋಷಣೆ.

**ದಿನಾಂಕ : 01.09.2009**

ಸಂಖ್ಯೆ:ಎಫ್.ಎಫ್.ಡಿ./29/ಎಫ್.ಎ.ಎಫ್/84 ಕರ್ನಾಟಕ ಸರ್ಕಾರವು ಈ ಕೆಳಗೆ ನಮೂದಿಸಿದ. ಸರಹದ್ದಿನಂತೆ 30565.05 ಹೆಕ್ಟರ್ಸ್ ಅರಣ್ಯ ಕ್ಷೇತ್ರವನ್ನು ರಕ್ಷಿತ ಅರಣ್ಯವನ್ನಾಗಿ ಮಾಡಲು ಅಧಿಸೂಚನೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗಿದೆ.

| ಕ್ರ. ಸಂ. | ಬ್ಲಾಕ್ | ಜಿಲ್ಲೆ | ತಾಲ್ಲೂಕು | ಗ್ರಾಮ | ಕ್ಷೇತ್ರ ವಿಸ್ತೀರ್ಣ (ಹೆಕ್ಟರ್‌ನಲ್ಲಿ) | ಸರ್ವೆ ನಂ |
|---|---|---|---|---|---|---|
| 1. | ರಾಮಮಲ್ಲೈ (R.M. Block) | ಬಳ್ಳಾರಿ | ಸಂಡೂರು | ರಾಮಘಡ | 7769.85 | – |
| 2. | ಸ್ವಾಮಿ ಮಲ್ಲೈ (S.M. Block) | ಬಳ್ಳಾರಿ | ಸಂಡೂರು | ಧರ್ಮಾಪುರ, ಲಕ್ಷ್ಮೀಪುರ, ಹುಲಿಕುಂಟೆ, ಬುಜಂಗನಗರ, ನರಸಿಂಗಪುರ, ರಂಜಿತ್‌ಪುರ, ಮುದ್ದಲಘಟ್ಟಿ, ದೇವಗಿರಿ. | 6996.22 | – |
| 3. | ದೋಣಿಮಲ್ಲೈ (D.M. Block) | ಬಳ್ಳಾರಿ | ಸಂಡೂರು | ತಾರಾನಗರ, ನಾರಾಯಣಾಪುರ, ರಂಜೀತ್‌ಪುರ, ವಿಠಲಾಪುರ, ನರಸಾಪುರ, ಬುಜಂಗನಗರ. | 6733.98 | – |
| 4. | ನಾರ್ಥ ಈಸ್ಟ್ರನ್ (N.E. Block) | ಬಳ್ಳಾರಿ | ಸಂಡೂರು | ವೆಂಕಟಗಿರಿ, ಜೈಸಿಂಗಪುರ, ಮೇದರಹಳ್ಳಿ, ಎಮ್ಮಿಹಟ್ಟಿ, ಸಿದ್ದಾಪುರ, ರಾಧಾನಗರ, ಸುಶೀಲಾನಗರ, ದೌಲತ್‌ಪುರ, ಕೃಷ್ಣನಗರ, ಗಂಡಿಬಸಾಪುರ, ತಾರಾನಗರ. | 9065.00 | – |

ಈ ಮೂಲಕ ಸಮಸ್ತ ಜನರಿಗೆ ತಿಳಿಸುವುದೇನೆಂದರೆ, ಕರ್ನಾಟಕ ಅರಣ್ಯ ಅಧಿನಿಯಮದ (5) ನೇ ಪ್ರಕರಣ ಮತ್ತು ಕರ್ನಾಟಕ ಅರಣ್ಯ ಅಧಿನಿಯಮದ (17) ನೇ ಪ್ರಕರಣದ ಅಂತಿಮ ಪ್ರಕಟಣೆಯ ಮಧ್ಯದಲ್ಲಿ.

1) ಈ ಅಧಿಸೂಚನೆಯಲ್ಲಿ ಸೂಚಿಸಿದ ಭೂಮಿಯಲ್ಲಿಯ ಒಡತನದ ಉತ್ತರಾಧಿಕಾರದ ಹಕ್ಕು ಅನುದಾನ, ಮಾರಾಟ, ಅಡವು ಪಡೆದಿದ್ದ ವ್ಯಕ್ತಿಯೊಂದಿಗೆ ಅಥವಾ ಸರಕಾರದೊಂದಿಗೆ ಮಾಡಿ ಕೊಳ್ಳಲಾದ ಲಿಖಿತ ಒಪ್ಪಂದದ ಮೂಲಕವಾಗಲಿ ಒಡೆತನದ ಹಕ್ಕನ್ನು ಪಡೆದವರನ್ನುಳಿದು ಇನ್ನು ಮುಂದೆ ಮೇಲೆ ಹೇಳಿದ ಜಮೀನಿನಲ್ಲಿ ಯಾವುದೇ ಭಾಗವನ್ನು, ಯಾವುದೇ ತರಹದ, ಒಡೆತನದ ಅಧಿಕಾರವನ್ನು ನಡೆಸಬಾರದೆಂದು ಸಂಬಂಧಪಟ್ಟ ಜನರಿಗೆ ತಿಳಿಸಲಾಗಿದೆ.
2) ಈ ಭೂಮಿಯ ಮೇಲೆ ಮರಗಳನ್ನು ಬೆಳೆಸುವುದಾಗಲಿ. ಹೊಸಮನೆಗಳನ್ನು ಕಟ್ಟುವುದಾಗಲಿ ಮಾಡಬಾರದು.
3) ವ್ಯವಸಾಯಕ್ಕಾಗಿ ಅಥವಾ ಮತ್ತಾವುದೇ ಉದ್ದೇಶಕ್ಕಾಗಿ ಈ ಭೂಮಿಯ ಪ್ರದೇಶವನ್ನು ಸ್ವಚ್ಛ ಮಾಡಬಾರದು.
4) ಈ ಭೂಮಿಯ ಮೇಲಿರತಕ್ಕಂತಹ ಮರಗಳನ್ನು ಉತ್ಪಾದನೆ ಅಥವಾ ವ್ಯಾಪಾರದ ಸಲುವಾಗಿ ಕದಿಯಬಾರದು.
5) ರಾಜ್ಯ ಸರ್ಕಾರದ ಪರವಾನಗಿ ಇಲ್ಲದೆ ಈ ಜಮೀನಿನಲ್ಲಿ ಪಟ್ಟಾವನ್ನಾಗಲಿ ಒಡೆತನದ ಹಕ್ಕನ್ನಾಗಲಿ ಮಂಜೂರು ಮಾಡಬಾರದು ಹಾಗೂ ಸರ್ಕಾರದ ಪರವಾನಗಿ ಇಲ್ಲದೇ ಪ್ರತಿಯೊಂದು ಪಟ್ಟಾ ಅಥವಾ ಒಡೆತನದ ಹಕ್ಕನ್ನು ಮಂಜೂರು ಮಾಡಬಾರದು ಹಾಗೂ ಸರ್ಕಾರ ಪರವಾನಗಿ ಇಲ್ಲದೇ ಪ್ರತಿಯೊಂದು ಪಟ್ಟಾ ಅಥವಾ ಒಡೆತನದ ಹಕ್ಕನ್ನು ಮಂಜೂರು ಮಾಡಿದ್ದಲ್ಲಿ ಅವೆಲ್ಲವುಗಳು ರದ್ದಾಗುತ್ತದೆ.
6) ಈ ಘೋಷಣೆಯಲ್ಲಿ ನಮೂದಿಸಿದ ಜಮೀನಿನಲ್ಲಿ ಅಥವಾ ಆ ಜಮೀನಿನ ಯಾವುದೇ ಸೀಮಿತ ಭಾಗದಲ್ಲಿ ಯಾವುದೇ ತರಹದ ಒಡೆತನ ಹಕ್ಕು ಅಥವಾ ಅರಣ್ಯ ಉತ್ಪನ್ನಗಳ ಬಗ್ಗೆ ತಕರಾರನ್ನು ಸಿವಿಲ್ ಕೋರ್ಟ ವಿಚಾರಣೆ ನಡೆಸಲು ನಿಷೇಧಿಸಲಾಗಿದೆ.

ಮೇಲೆ ಕಾಣಿಸಿದ ಅಧಿಸೂಚನೆಯನ್ನು ಶಾಮೀಲಾದ ಅಥವಾ ತಲುಪಿದ ಮೂರು ತಿಂಗಳ ಒಳಗಾಗಿ ಹಿತಾರ್ಥವುಳ್ಳ ವ್ಯಕ್ತಿಗಳನ್ನು ತಮ್ಮ ಹಿತಾಸಕ್ತಿಯಿಂದ ಸ್ವರೂಪಗಳನ್ನು ವಿವರವಾಗಿ ತೋರಿಸುವ ಲಿಖಿತ ಅರ್ಜಿಯನ್ನು ಖುದ್ದಾಗಿ ಅಧಿಕೃತ ಕಾಗದ ಪತ್ರಗಳೊಂದಿಗೆ ಬಳ್ಳಾರಿ ಅರಣ್ಯ ಕ್ಷೇತ್ರ ನಿರ್ಧಾರಣಾಧಿಕಾರಿಗಳ ಸಮ್ಮುಖದಲ್ಲಿ ಮಂಡಿಸತಕ್ಕದ್ದು.

ತಮ್ಮ ಒಡೆತನದ ಹಕ್ಕು ಹಿತಾಸಕ್ತಿಗಳ ಬಗ್ಗೆ ಮೇಲೆ ಕಾಣಿಸಿದ ಅವಧಿಯಲ್ಲಿ ಅರ್ಜಿ ಸಲ್ಲಿಸದಿದ್ದ ಪಕ್ಷದಲ್ಲಿ ಈ ಭೂಮಿಯನ್ನು ರಕ್ಷಿತ ಅರಣ್ಯ ಕ್ಷೇತ್ರವೆಂದು ಕರ್ನಾಟಕ ಸರ್ಕಾರದ ರಾಜ್ಯ ಪತ್ರದಲ್ಲಿ ಪ್ರಕಟಿಸಲಾಗುವುದು.

ಅಧಿಸೂಚನೆ ಪ್ರಕಟವಾದ ಮೇಲೆ ಒಡೆತನದ ಹಕ್ಕುಗಳೆಲ್ಲವೂ ರದ್ದಾಗುವುದೆಂದು ಈ ಮೂಲಕ ಸಂಬಂಧಪಟ್ಟ ಜನರಿಗೆ ತಿಳಿಸಲಾಗುವುದು / ತಿಳಿಸಲಾಗಿದೆ.

ಈ ಪ್ರಕಟಣೆಯು ದಿನಾಂಕ:01.09.2009 ರಂದು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಹೊರಡಿಸಲಾಗಿದೆ.

ಅರಣ್ಯ ಕ್ಷೇತ್ರ ನಿರ್ಧಾರಾಧಿಕಾರಿಗಳು,
ಬಳ್ಳಾರಿ.

ಪಿ.ಆರ್.887

**ಕರ್ನಾಟಕ ವಿಧಾನಸಭೆ**

**ವಿಧಾನಸಭೆಯ ಸಚಿವಾಲಯ, ಅಂಚೆ ಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು-560 233**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008-09, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಧಾರವಾಡ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ ಶ್ರೀಮತಿ ಸೀಮಾ ಅಶೋಕ ಮಸೂತಿ ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀಮತಿ ಸೀಮಾ ಅಶೋಕ ಮಸೂತಿ,
ವಿಧಾನಸಭಾ ಸದಸ್ಯರು, "ಸಾಯಿ ಕೃಪ", ನಂ.33, 3ನೇ ಅಡ್ಡರಸ್ತೆ, ಶ್ಯಾಂಬವಿ ಕಾಲೋನಿ, ಗಾಂಧಿನಗರ,
ಧಾರವಾಡ-580004.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

ಪಿ.ಆರ್.882

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಡಿಪಿಎಆರ್ 11 ಹೆಚ್‌ಹೆಚ್‌ಎಲ್ 2009, ಬೆಂಗಳೂರು, ದಿನಾಂಕ:3ನೇ ಸೆಪ್ಟೆಂಬರ್, 2009**

ಡಾ: ವೈ.ಎಸ್. ರಾಜಶೇಖರ ರೆಡ್ಡಿ, ಆಂಧ್ರ ಪ್ರದೇಶದ ಮುಖ್ಯಮಂತ್ರಿಗಳು, ದಿನಾಂಕ:02.09.2009 ರಂದು ನಿಧನರಾದ ವಿಷಯವನ್ನು ರಾಜ್ಯ ಸರ್ಕಾರವು ತೀವ್ರ ಸಂತಾಪದಿಂದ ಈ ಮೂಲಕ ಪ್ರಕಟಿಸಿದೆ.

ದಿವಂಗತರ ಗೌರವಾರ್ಥವಾಗಿ ರಾಜ್ಯದಲ್ಲಿನ ಎಲ್ಲಾ ಸರ್ಕಾರಿ ಕಛೇರಿಗಳಿಗೂ ಮತ್ತು ಎಲ್ಲಾ ಶಾಲಾ ಕಾಲೇಜುಗಳಿಗೂ (ಅನುದಾನ ಪಡೆಯುವ ಎಲ್ಲಾ ವಿದ್ಯಾಸಂಸ್ಥೆಗಳೂ ಸೇರಿದಂತೆ) ದಿನಾಂಕ:04.09.2009ರಂದು ರಜೆ ಘೋಷಿಸಲಾಗಿದೆ. ಅಲ್ಲದೇ, ದಿನಾಂಕ:03.09.2009 ರಿಂದ 04.09.2009ರವರೆಗೆ ರಾಜ್ಯಾದ್ಯಂತ ಶೋಕವನ್ನು ಆಚರಿಸಲಾಗುವುದು. ಈ ಅವಧಿಯಲ್ಲಿ ಯಾವುದೇ ಅಧಿಕೃತ ಸಾರ್ವಜನಿಕ ಸಮಾರಂಭಗಳು, ಮನರಂಜನಾ ಕಾರ್ಯಕ್ರಮಗಳು ಇರುವುದಿಲ್ಲ. ಹಾಗೂ ನಿಯತವಾಗಿ ರಾಷ್ಟ್ರಧ್ವಜವನ್ನು ಹಾರಿಸಲಾಗುವ ಸರ್ಕಾರದ ಎಲ್ಲಾ ಕಟ್ಟಡಗಳ ಮೇಲೆ ರಾಷ್ಟ್ರಧ್ವಜವನ್ನು ಅರ್ಧ ಮಟ್ಟದಲ್ಲಿ ಹಾರಿಸಲಾಗುವುದು.

ಸದರಿ ಆದೇಶವು ನೆಗೋಷಿಯೇಬಲ್ ಇನ್ಸ್‌ಸ್ಟ್ರುಮೆಂಟ್ ಆಕ್ಟ್ 1881ರ ಪ್ರಕಾರವೂ ಕೂಡ ಸಾರ್ವಜನಿಕ ರಜೆ ಎಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ವಿ. ರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ, (ರಾಜ್ಯ ಶಿಷ್ಟಚಾರ-1)

ಪಿ.ಆರ್.879

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು ರವರ ಕಛೇರಿ**

**ಆದೇಶದ ಉದ್ಧೃತ ಭಾಗ**

**ಕಛೇರಿ ಆದೇಶ ಸಂಖ್ಯೆ:28:2009-10, ದಿನಾಂಕ:31ನೇ ಆಗಸ್ಟ್, 2009**

**ವಿಷಯ:** ಶ್ರೀ ಬಿ. ಸುರೇಶ್, ಅರಣ್ಯ ರಕ್ಷಕ, ತಳವಾರ ಗಸ್ತು, ಆಲ್ದೂರು ವಲಯ ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಮೂಲಕ ಕರ್ತವ್ಯ ಲೋಪ ಎಸಗಿದ್ದು, ಶಿಸ್ತುಕ್ರಮ ಜರುಗಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:38/2007-08, ದಿನಾಂಕ:18.09.2007.

2) ಈ ಕಛೇರಿ ಅಧಿಕೃತ ಜ್ಞಾಪನಾ ಪತ್ರ ಸಂಖ್ಯೆ: ಎ2.ಸಿಬ್ಬಂದಿ: ವಿವ: 39: 2005-06, ದಿನಾಂಕ:27.12.2007.

3) ಹಿರಿಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೂಡಿಗೆರೆ ಉಪವಿಭಾಗ, ಮೂಡಿಗೆರೆ ಇವರ ಪತ್ರ ಸಂಖ್ಯೆ:1116/2008-09, ದಿನಾಂಕ:18.02.2009.

4) ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ–1958, ನಿಯಮ 108.
5) ಕೆ.ಸಿ.ಎಸ್. (ಸಿ.ಸಿ.ಎ.) 1957, ನಿಯಮ 8(vii) ಹಾಗೂ 14.
6) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:18:ಸೇಇವಿ:2001, ಬೆಂಗಳೂರು, ದಿನಾಂಕ:14.09.2001.
7) ಕರ್ನಾಟಕ ರಾಜ್ಯಪತ್ರ ಪ್ರಕಟಣೆ ದಿನಾಂಕ:02.07.2009.

**ಪ್ರಸ್ತಾವನೆ:**

ಚಿಕ್ಕಮಗಳೂರು ವಿಭಾಗದ ವ್ಯಾಪ್ತಿಯಲ್ಲಿ ಬರುವ ಆಲ್ದೂರು ವಲಯದ ತಳವಾರ ಗಸ್ತಿನಲ್ಲಿ ಅರಣ್ಯ ರಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ಬಿ.ಸುರೇಶ್ ಇವರು ದಿನಾಂಕ:09.08.2006 ರಿಂದ ದಿನಾಂಕ:17.09.2007ರ ವರೆಗೆ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾದ ಬಗ್ಗೆ ಉಲ್ಲೇಖ (1)ರಲ್ಲಿ ಸದರಿ ನೌಕರರನ್ನು ಸರ್ಕಾರಿ ಕೆಲಸ ಕಾರ್ಯಗಳಿಂದ ಅಮಾನತುಪಡಿಸಿದ್ದು, ಹಾಗೇ ಉಲ್ಲೇಖ (2) ರಲ್ಲಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ಕೈಗೊಳ್ಳಲು ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೂಡಿಗೆರೆ ಉಪವಿಭಾಗ, ಮೂಡಿಗೆರೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ವಲಯ ಅರಣ್ಯಾಧಿಕಾರಿ, ಖಾಸಗಿ ನಾಟಾಗಳ ಛಾಪಾ ಘಟಕ, ಚಿಕ್ಕಮಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿರುತ್ತದೆ. ಆರೋಪಿತ ನೌಕರರಿಗೆ ವಿಚಾರಣಾಧಿಕಾರಿ ಹಾಗೂ ಅರಣ್ಯ ಸಂರಕ್ಷಣಾಧಿಕಾರಿ, ಮೂಡಿಗೆರೆ ಉಪವಿಭಾಗ, ಮೂಡಿಗೆರೆ ಇವರು ಕ್ರಮವಾಗಿ ದಿನಾಂಕ:26.02.2008 ಹಾಗೂ 13.03.2008ರಂದು 2 ಬಾರಿ ವಿಚಾರಣೆಗೆ ಹಾಜರಾಗುವಂತೆ ನೊಂದಾಯಿತ ಅಂಚೆ ಮುಖಾಂತರ ನೋಟೀಸ್ ಜಾರಿ ಮಾಡಲಾಗಿ, "Party Not Found" ಎಂಬ ಷರಾದೊಂದಿಗೆ ವಾಪಾಸು ಬಂದಿರುತ್ತದೆ. ನಂತರದಲ್ಲಿ ಆರೋಪಿತ ನೌಕರರಿಗೆ 3ನೇ ನೋಟೀಸ್‌ನ್ನು ವನಪಾಲಕ, ಸಾರಗೋಡು ಶಾಖೆ, ಸಾರಗೋಡು ಇವರ ಮುಖಾಂತರ ಜಾರಿಗೊಳಿಸಲು ನಿರ್ದೇಶನ ನೀಡಿದ್ದು, ಅದರಂತೆ ವನಪಾಲಕರು ನೋಟೀಸನ್ನು ಆರೋಪಿತ ನೌಕರರಿಗೆ ದಿನಾಂಕ:21.04.2008ರಂದು ಜಾರಿ ಮಾಡಿದ್ದು, ನೋಟೀಸ್ ಪಡೆದರೂ ಸಹಾ, ಆರೋಪಿತ ನೌಕರರು ವಿಚಾರಣೆಗೆ ಹಾಜರಾಗಿರುವುದಿಲ್ಲ. ನಂತರ 4ನೇ ನೋಟೀಸನ್ನು ಜಾರಿಗೊಳಿಸುವ ಸಲುವಾಗಿ ನೌಕರರ ಸ್ವಗ್ರಾಮವಾದ ಸಕ್ರೆಬೈಲ್, ಶಿವಮೊಗ್ಗ ತಾಲ್ಲೂಕು ಹಾಗೂ ಜಿಲ್ಲೆ ಇಲ್ಲಿಗೆ ವನಪಾಲಕರು ತೆರಳಿ ವಿಚಾರಿಸಲಾಗಿ, ಅವರ ತಾಯಿ ಹಾಗೂ ಅವರ ತಮ್ಮ ಸದರಿಯವರು ಈಗ ಇಲ್ಲಿ ವಾಸವಾಗಿರುವುದಿಲ್ಲ, ಮೈಸೂರಿನಲ್ಲಿ ವಾಸವಾಗಿರುತ್ತಾರೆ ಎಂಬುದಾಗಿ ತಿಳಿಸಿರುತ್ತಾರೆ. ದಿನಾಂಕ:14.08.2008ರಂದು ಇಲಾಖಾ ವಿಚಾರಣೆ ಇದ್ದು, ವಿಚಾರಣೆಗೆ ಹಾಜರಾಗಲು ತಿಳಿಸುವಂತೆ ಅವರ ತಾಯಿಗೆ ತಿಳಿಸಿ, ನೋಟೀಸ್‌ನ್ನು ಅವರ ತಾಯಿಗೆ ನೀಡಿ ಸ್ವೀಕೃತಿ ಪಡೆಯಲಾಗಿರುತ್ತದೆ. ನಂತರ ದಿನಾಂಕ:28.08.2008ರಂದು ಸದರಿ ವನಪಾಲಕರು ಆರೋಪಿತ ನೌಕರರ ಪತ್ತೆಗಾಗಿ ಸ್ವಗ್ರಾಮಕ್ಕೆ ತೆರಳಿ, ವಿಚಾರಿಸಲಾಗಿ, ಅಲ್ಲಿ ನೌಕರರು ಇರಲಿಲ್ಲ. ಮನೆಯಲ್ಲಿ ಅವರ ತಾಯಿ ಹಾಗೂ ಅವರ ತಮ್ಮ ಮಾತ್ರ ಇದ್ದು, ಅವರನ್ನು ವಿಚಾರಿಸಲಾಗಿ, ಆರೋಪಿತ ನೌಕರರು ಈಗ ಇಲ್ಲಿ ವಾಸವಾಗಿರುವುದಿಲ್ಲ. ಮೈಸೂರಿನಲ್ಲಿ ಇರುತ್ತಾರೆ ಎಂದು ತಿಳಿಸಿರುತ್ತಾರೆ. ದಿನಾಂಕ:10.09.2008ರಂದು ಇಲಾಖಾ ವಿಚಾರಣೆ ಇದ್ದು, ವಿಚಾರಣೆಗೆ ಹಾಜರಾಗಲು ತಿಳಿಸುವಂತೆ ಅವರ ತಾಯಿಗೆ ತಿಳಿಸಿ, ನೋಟೀಸನ್ನು ಅವರ ತಾಯಿಗೆ ನೀಡಿ ಸ್ವೀಕೃತಿ ಪಡೆಯಲಾಗಿರುತ್ತದೆ.

ನಂತರದಲ್ಲಿ ದಿನಾಂಕ:01.12.2008ರಂದು ವನಪಾಲಕರು, ಸಾರಗೋಡು ಶಾಖೆ ಇವರು ಆರೋಪಿತ ನೌಕರರ ಸ್ವಗ್ರಾಮಕ್ಕೆ ಅಂತಿಮವಾಗಿ ತೆರಳಿ, ಅವರ ವಾಸದ ಮನೆ ಆವರಣದಲ್ಲಿ ಕಾರ್ಯದರ್ಶಿ, ಗ್ರಾಮ ಪಂಚಾಯಿತಿ, ಗಾಜನೂರು ಇವರ ಹಾಗೂ ಗ್ರಾಮದ ಮುಖ್ಯಸ್ಥರ ಸಮಕ್ಷಮ ಸ್ಥಳ ಮಹಜರ್ ಜರುಗಿಸಿದ್ದು, ಅದರಲ್ಲಿ ಆರೋಪಿತ ನೌಕರರ ತಮ್ಮ ಶ್ರೀ ಶಿವಣ್ಣ ಇವರು ಹಾಜರಿದ್ದು, ನನ್ನ ಅಣ್ಣನಾದ ಶ್ರೀ ಬಿ.ಸುರೇಶ್ ಇವರು ಇಲ್ಲಿ ವಾಸವಾಗಿರುವುದಿಲ್ಲ. ಅವರ ಹೆಂಡತಿ, ಮಕ್ಕಳೊಂದಿಗೆ ಕೊಡಗು ಜಿಲ್ಲೆಯ ಗೋಣಿಕೊಪ್ಪದಲ್ಲಿ ಇರುತ್ತಾರೆ, ಕಳೆದ 8 ತಿಂಗಳಿಂದ ಸ್ವಗ್ರಾಮಕ್ಕೆ ಬಂದಿಲ್ಲವೆಂದು ತಿಳಿಸಿರುತ್ತಾರೆ. ಅಲ್ಲದೆ ಸದರಿ ನೌಕರರ ಸರಿಯಾದ ವಿಳಾಸವಾಗಲಿ, ದೂರವಾಣಿ ಸಂಖ್ಯೆಯಾಗಲಿ ತನಗೆ ತಿಳಿದಿಲ್ಲ ಎಂಬುದಾಗಿ ತಿಳಿಸಿರುತ್ತಾರೆ.

ಮುಂದುವರೆದು ವಿಚಾರಣಾಧಿಕಾರಿಯವರು ಆರೋಪಿತ ನೌಕರರ ಪತ್ತೆಗಾಗಿ ಆರಕ್ಷಕ ನಿರೀಕ್ಷಕರು, ತುಂಗಾನಗರ ಪೊಲೀಸ್ ಠಾಣೆ, ಶಿವಮೊಗ್ಗ ಇವರಿಗೆ ದೂರು ದಾಖಲಿಸಲು ಹೋದ ಸಮಯದಲ್ಲಿ, ಸದರಿಯವರು ಪ್ರಾರಂಭಿಕ ದೂರನ್ನು ಆಲ್ದೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಬೇಕೆಂಬುದಾಗಿ ಸಲಹೆ ನೀಡಿದ ಮೇರೆಗೆ, ಆಲ್ದೂರು ಪೊಲೀಸ್ ಠಾಣೆಯಲ್ಲಿ ಆರೋಪಿತ ನೌಕರರ ಪತ್ತೆಗಾಗಿ ದೂರು ದಾಖಲಾಗಿಸಲಾಗಿದ್ದು, ಈವರೆಗೂ ನೌಕರರ ಸುಳಿವು ಸಿಕ್ಕಿರುವುದಿಲ್ಲ ಎಂಬುದಾಗಿ ಉಲ್ಲೇಖ (3)ರಲ್ಲಿ ವಿಚಾರಣಾಧಿಕಾರಿಗಳು ಹಾಗೂ ಹಿರಿಯ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಮೂಡಿಗೆರೆ ಉಪವಿಭಾಗ, ಮೂಡಿಗೆರೆ ಇವರು ವರದಿ ಸಲ್ಲಿಸಿರುತ್ತಾರೆ ಅಲ್ಲದೆ ಆರೋಪಿತ ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಬಹುದಾಗಿ ಶಿಫಾರಸ್ಸು ಮಾಡಿರುತ್ತಾರೆ.

ಆದ್ದರಿಂದ ಈ ಪ್ರಕರಣದಲ್ಲಿ ಆರೋಪಿತ ನೌಕರರಾದ ಶ್ರೀ ಬಿ.ಸುರೇಶ್ ಇವರು ದಿನಾಂಕ:09.08.2006 ರಿಂದ ಈ ದಿನಾಂಕದವರೆಗೂ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಇದರಿಂದ ಸದರಿಯವರಿಗೆ ವಹಿಸಲಾದ ತಳವಾರ ಗಸ್ತಿನ ವ್ಯಾಪ್ತಿಯಲ್ಲಿ ಬರುವ ಅರಣ್ಯ/ ಮೀಸಲು ಅರಣ್ಯದ ರಕ್ಷಣೆ, ಮರಗಳ ಅಕ್ರಮ ಕಡಿತಲೆ, ಒತ್ತುವರಿ ನಿಯಂತ್ರಣ ಹಾಗೂ

ಇನ್ನಿತರೆ ಅರಣ್ಯೇತರ ಚಟುವಟಿಕೆಗಳನ್ನು ನಿಯಂತ್ರಿಸುವಲ್ಲಿ ಕಿಂಚಿತ್ತು ಆಸಕ್ತಿ ಹಾಗೂ ಜವಾಬ್ದಾರಿಯನ್ನು ವಹಿಸಿಕೊಳ್ಳದೆ, ಬೇಜವಾಬ್ದಾರಿಯಿಂದ ವರ್ತಿಸಿ, ಇಲಾಖೆಯಿಂದ ನೀಡಲಾದ ಯಾವುದೇ ನೋಟೀಸ್‌ಗಳಿಗೆ ಲಿಖಿತವಾಗಿ ಉತ್ತರಿಸದೆ, ಕರ್ತವ್ಯಲೋಪ ಎಸಗಿರುತ್ತಾರೆ.

ಮೇಲ್ಕಂಡ ಎಲ್ಲಾ ಕಾರಣಗಳಿಂದಾಗಿ ಸದರಿ ಆಪಾದಿತ ಸರ್ಕಾರಿ ನೌಕರ ದಿನಾಂಕ:09.08.2006 ರಿಂದ ಈವರೆಗಿನ ಗೈರು ಹಾಜರಿಯಿಂದಾಗಿ ತಳವಾರ ಗಸ್ತಿನ ಕಾರ್ಯ ನಿರ್ವಹಣೆ ಕಷ್ಟಸಾಧ್ಯವಾಗಿರುವುದರಿಂದ, ಆರೋಪಿತ ನೌಕರರಿಗೆ ಪುನಃ ಕರ್ತವ್ಯದ ಮೇಲೆ ಹಿಂದಿರುಗಲು ಪತ್ರಿಕಾ ಪ್ರಕಟಣೆ ಹಾಗೂ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆ ಹೊರಡಿಸುವಂತೆ ದಿನಾಂಕ:26.03.2009 ರಲ್ಲಿ ಸಂಬಂಧಪಟ್ಟ ಇಲಾಖೆಗೆ ಕೋರಿದ್ದು, ಆ ಪ್ರಕಾರ ಪತ್ರಿಕಾ ಪ್ರಕಟಣೆಗೊಂಡಿರುತ್ತದೆ. ಅದೇ ರೀತಿ ದಿನಾಂಕ:02.07.2009ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಿರುತ್ತದೆ.

ಕರ್ನಾಟಕ ಅರಣ್ಯ ಸಂಹಿತೆ, 1976– ಅನುಚ್ಛೇದ 125 ರಲ್ಲಿ ಅರಣ್ಯ ರಕ್ಷಕರ ಜವಾಬ್ದಾರಿಗಳನ್ನು ವಿವರಿಸಲಾಗಿದ್ದು, ಅದರಂತೆ ಕೇಂದ್ರ ಸ್ಥಾನದಲ್ಲಿ ವಾಸವಿದ್ದು, ಗಸ್ತಿನ ವ್ಯಾಪ್ತಿಯಲ್ಲಿ ಬರುವ ಅರಣ್ಯ ಸಂಪತ್ತಿನ ಸಂರಕ್ಷಣೆ, ಅರಣ್ಯ ಒತ್ತುವರಿ ತಡೆಗಟ್ಟುವಿಕೆ, ವನ್ಯಪ್ರಾಣಿಗಳ ಸಂರಕ್ಷಣೆ, ಅರಣ್ಯ ಅಪರಾಧಗಳ ತಡೆಗಟ್ಟುವಿಕೆ ಹಾಗೂ ಯಾವುದೇ ಅರಣ್ಯೇತರ ಚಟುವಟಿಕೆಗಳಿಗೆ ಅವಕಾಶ ನೀಡದಿರುವುದು ಅವರ ಆದ್ಯ ಕರ್ತವ್ಯವಾಗಿರುತ್ತದೆ. ಶ್ರೀ ಬಿ. ಸುರೇಶ್, ಅರಣ್ಯ ರಕ್ಷಕ ಇವರು ತಮ್ಮ ಹುದ್ದೆಯ ಪ್ರಾಥಮಿಕ ಜವಾಬ್ದಾರಿಗಳನ್ನು ಮರೆತು, ಕರ್ತವ್ಯ ನಿರ್ಲಕ್ಷತೆ ತೋರಿರುತ್ತಾರೆ. ಅಲ್ಲದೆ ಸದರಿಯವರ ಗೈರು ಹಾಜರಿಗೆ ಸಂಬಂಧಿಸಿದಂತೆ ಇಷ್ಟೆಲ್ಲಾ ಬೆಳವಣಿಗೆಗಳು ನಡೆದರೂ, ಯಾವುದೇ ನೋಟೀಸ್‌ಗಳಿಗೆ ವಿವರಣೆ ನೀಡುವ ಕನಿಷ್ಟ ಆಸಕ್ತಿ ತೋರಿಸದೇ ಇರುವ ಮೂಲಕ, ಅಶಿಸ್ತಿನಿಂದ ನಡೆದುಕೊಂಡಿರುತ್ತಾರೆ.

ಈ ಪ್ರಕರಣದ ಇಲಾಖಾ ವಿಚಾರಣೆ ಹಾಗೂ ನಂತರದ ಬೆಳವಣಿಗೆಯ ಎಲ್ಲಾ ಪ್ರಕ್ರಿಯೆಗಳನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಸದರಿಯವರ ಕರ್ತವ್ಯ ನಿರ್ಲಕ್ಷತೆ ಹಾಗೂ ಅನಧಿಕೃತ ಗೈರು ಹಾಜರಿಯು ಸಾಬೀತಾಗಿದ್ದು, ಇವರು ಇಲಾಖಾ ಕಾಯ್ದೆ, ಕಾನೂನುಗಳನ್ನು ಉಲ್ಲಂಘಿಸಿರುವುದರಿಂದ, ಇಲಾಖೆಯಲ್ಲಿ ಒಂದು ಜವಾಬ್ದಾರಿಯುತ ಹುದ್ದೆಯಾದ ಅರಣ್ಯ ರಕ್ಷಕರ ಹುದ್ದೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಿ. ಸುರೇಶ್, ಅರಣ್ಯ ರಕ್ಷಕ (ಪ್ರಸ್ತುತ ಅಮಾನತ್ತಿನಲ್ಲಿರುವ), ತಳವಾರ ಗಸ್ತು, ಆಲ್ದೂರು ವಲಯ, ಆಲ್ದೂರು ಇವರ ಮೇಲಿನ ದೋಷಾರೋಪಣಾ ಪಟ್ಟಿಯಲ್ಲಿ ಮಾಡಿರುವ ಆರೋಪಗಳು ಸಾಬೀತಾಗಿರುವುದರಿಂದ, ಅಲ್ಲದೆ ಸದರಿಯವರಿಗೆ ಇಲಾಖೆಯಲ್ಲಿ ಮುಂದುವರೆಯುವ ಬಗ್ಗೆ ಸಾಕಷ್ಟು ಅವಕಾಶಗಳು ನೀಡಿದರೂ ಸಹಾ, ಸದರಿಯವರು ಕರ್ತವ್ಯದ ಮೇಲೆ ಪುನಃ ಹಾಜರಾಗಿರುವುದಿಲ್ಲವಾದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ, 1958– ನಿಯಮ, 108, ಕೆ.ಸಿ.ಎಸ್. (ಸಿ.ಸಿ.ಎ.) 1957, ನಿಯಮ 8(vii) ಹಾಗೂ 14 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:18:ಸೇಇವಿ:2001, ಬೆಂಗಳೂರು, ದಿನಾಂಕ:14.09.2001ರ ಆದೇಶದ ಪ್ರಕಾರ ಶ್ರೀ ಬಿ. ಸುರೇಶ್, ಅರಣ್ಯ ರಕ್ಷಕ (ಪ್ರಸ್ತುತ ಅಮಾನತ್ತಿನಲ್ಲಿರುವ), ತಳವಾರ ಗಸ್ತು, ಆಲ್ದೂರುವಲಯ, ಆಲ್ದೂರು ಇವರನ್ನು ಇಲಾಖೆಯಲ್ಲಿ ಅರಣ್ಯ ರಕ್ಷಕ ಹುದ್ದೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ, ಶ್ರೀ ಕೆ.ಹೆಚ್. ನಾಗರಾಜ್, ಭಾ.ಆ.ಸೇ., ಶಿಸ್ತು ಪ್ರಾಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು ಆದ ನಾನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ತೆಗೆದುಹಾಕಿರುತ್ತೇನೆ ಹಾಗೂ ಸದರಿಯವರ ದಿನಾಂಕ:09.08.2006 ರಿಂದ ಈವರೆಗಿನ ಅನಧಿಕೃತ ಗೈರು ಹಾಜರಿಯ ಅವಧಿಯನ್ನು "ಕರ್ತವ್ಯವಲ್ಲದ ಅವಧಿ" ಎಂದು ಪರಿಗಣಿಸಿ, ಆದೇಶ ಹೊರಡಿಸಿದೆ.

**ಕೆ.ಹೆಚ್. ನಾಗರಾಜ್, ಭಾ.ಆ.ಸೇ.**
ಶಿಸ್ತು ಪ್ರಾಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

ಪಿ.ಆರ್.880

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/259/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು**: ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು,<br>ನಂಜನಗೂಡು ಗ್ರಾಮಾಂತರ ಠಾಣೆ, ನಂಜನಗೂಡು. | **ವಿರುದ್ಧ** | ಸಿದ್ದರಾಜು ಮತ್ತು ಕೃಷ್ಣ<br>ಬೂಕಳ್ಳಿ ಗ್ರಾಮ, ನಂಜನಗೂಡು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.02.2008 ರಂದು ಬೆಳಿಗ್ಗೆ 10:30 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ, ಇವರು ನಂಜನಗೂಡು ತಾಲ್ಲೂಕು, ಬಸವಪುರ ಸರ್ಕಾರಿ ಶಾಲೆಯ ಹತ್ತಿರ ಕೆಎ–01/ಎಲ್–7568 ನೋಂದಣಿ ಸಂಖ್ಯೆಯ ಟಿ.ವಿ.ಎಸ್.ಎಕ್ಸಲ್–50 ವಾಹನದಲ್ಲಿ ಅಕ್ರಮವಾಗಿ 17.280 ಲೀ. ಓರಿಜಿನಲ್ ಚಾಯ್ಸ್ ವಿಸ್ಕಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೇಲ್ಕಂಡ ವಾಹನ, ಆರೋಪಿ ಮತ್ತು ಮದ್ಯವನ್ನು ನಂಜನಗೂಡು ಗ್ರಾಮಾಂತರ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಹಾಜರುಪಡಿಸಿ, ಠಾಣಾ ಪ್ರಕರಣ ಸಂಖ್ಯೆ: 75/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34, 38(ಎ), 39ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:05.11.2008 ರಂದು ಕೋರಿರುತ್ತಾರೆ. ಅಂತೆಯೇ ಅದೇ ದಿನದಂದು ನಂಜನಗೂಡು ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಮೈಸೂರು (ಪೂರ್ವ) ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:05.11.2008ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ), 39ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (16) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/259/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಗ್ರಾಮಾಂತರ ಠಾಣೆ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 75/2008, ದಿನಾಂಕ:28.02.2008 ರಂದು ವಶಪಡಿಸಿಕೊಂಡ ಕೆಎ–01/ಎಲ್–7568 ನೋಂದಣಿ ಸಂಖ್ಯೆಯ ಟಿ.ವಿ.ಎಸ್.ಎಕ್ಸಲ್–50 ವಾಹನ ಮತ್ತು 17.280 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.874

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/216/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| ಪಿರ್ಯಾದುದಾರರು | | ಪ್ರತಿವಾದಿ / ಆರೋಪಿ |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಉದಯಗಿರಿ, ಪೊಲೀಸ್ ಠಾಣೆ, ಮೈಸೂರು. | ವಿರುದ್ಧ | 1) ಅಪ್ಸರ್ ಅಹಮ್ಮದ್ ಬಿನ್ ಅಬ್ದುಲ್ ರೆಹಮಾನ್<br>2) ಸುಹೇಲ್ ಖಾನ್ ಬಿನ್ ಸಲಾಮ್ ಪಾಷಾ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:13.09.2008 ರಂದು ಮಧ್ಯಾಹ್ನ 12:15 ಗಂಟೆಯ ಸಮಯದಲ್ಲಿ ಗರುಡ–10ರ ಸಹಾಯಕ ಆರಕ್ಷಕ ಉಪ ನಿರೀಕ್ಷಕರು ಮತ್ತು ಸಿಬ್ಬಂದಿಯವರು, ಮೈಸೂರು ನಗರ, ಉದಯಗಿರಿ, ರಾಜೀವ್ ನಗರ 1ನೇ ಹಂತ, 7ನೇ ಕ್ರಾಸ್, ಮನೆ ನಂ.1194ರ ಅಪ್ಸರ್ ಅಹಮ್ಮದ್ ರವರ ಮನೆಯ ಮುಂದೆ ಕೆಎಲ್–10/ಜಿ–1814 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ವಾಹನವನ್ನು ಸುತ್ತುವರಿದು, ಸದರಿ ಆಟೋ ಚಾಲಕನನ್ನು ವಿಚಾರ ಮಾಡುತ್ತಿದ್ದಾಗ, ಮನೆಯಿಂದ ಒಬ್ಬ ವ್ಯಕ್ತಿಯು ಹೊರಗೆ ಬಂದು ಕೆಎ–09/ಕ್ಯೂ–9013 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಹೋಗಲು ಪ್ರಯತ್ನಿಸುತ್ತಿದ್ದಾಗ ಆತನನ್ನು ಹಿಡಿದು ವಿಚಾರಿಸಲಾಗಿ, ಅಪ್ಸರ್ ಅಹಮ್ಮದ್ ಬಿನ್ ಅಬ್ದುಲ್ ರೆಹಮಾನ್, ನಂ.1194, 7ನೇ ಕ್ರಾಸ್, ರಾಜೀವ್‌ನಗರ, ಮೈಸೂರು ಎಂದು ತಿಳಿಸಿದ್ದು, ಆಟೋ ಓಡಿಸುತ್ತಿದ್ದವನನ್ನು ವಿಚಾರ ಮಾಡಲಾಗಿ, ಸುಹೇಲ್ ಖಾನ್ ಬಿನ್ ಸಲಾಮ್ ಪಾಷಾ, ಉಸ್ಥಾನಿಯ ಮಸೀದಿ ಹಿಂಭಾಗ, ಸುಲ್ತಾನ್ ರಸ್ತೆ, ಗೌಸಿಯ ನಗರ, ಮೈಸೂರು ಎಂದು ತಿಳಿಸಿದ್ದು, ಆಟೋವನ್ನು ಪರಿಶೀಲಿಸಲಾಗಿ 35 ಲೀ. ಸಾಮರ್ಥ್ಯದ ಒಂದು ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಬ್ಲೆಂಡ್ ಮದ್ಯವಿದ್ದು ಅಲ್ಲದೇ 40 ಖಾಲಿ ಕ್ವಾಟರ್ ಬಾಟಲ್‌ಗಳು ಕಂಡುಬಂದಿದ್ದು, ನಂತರ ಮನೆಯ ಒಳಗೆ ಪ್ರವೇಶ ಮಾಡಿ ನೋಡಲಾಗಿ, 35 ಲೀ. ಸಾಮರ್ಥ್ಯದ 2 ಬಿಳಿ ಪ್ಲಾಸ್ಟಿಕ್ ಕ್ಯಾನ್‌ಗಳು ಇದ್ದು, 1ರಲ್ಲಿ ಬ್ಲೆಂಡ್ ಮದ್ಯ ತುಂಬಿದ್ದು, ಮತ್ತೊಂದರಲ್ಲಿ ಕಾಲುಭಾಗ ಬ್ಲೆಂಡ್ ಮದ್ಯವಿರುತ್ತದೆ. ಅಲ್ಲದೇ ಓರಿಜಿನಲ್ ಚಾಯ್ಸ್ ವಿಸ್ಕಿ ಲೇಬಲ್‌ಗಳು, ಮುಚ್ಚಳಗಳನ್ನು ಹೊಂದಿದ್ದ ಆರೋಪಕ್ಕಾಗಿ 2 ವಾಹನಗಳು ಮತ್ತು ಅಬಕಾರಿ ವಸ್ತುಗಳನ್ನು ಜಪ್ತು ಮಾಡಿ, ಮೊಕದ್ದಮೆ ಸಂಖ್ಯೆ: 175/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34, 38(ಎ)ರ' ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:16.09.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:26.09.2008 ರಂದು ಮೈಸೂರು ವಲಯ ನಂ.1, ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಸಂಬಂಧಪಟ್ಟ ಸಾರಿಗೆ ಪ್ರಾಧಿಕಾರಕ್ಕೆ ಈ ಪ್ರಾಧಿಕಾರದಿಂದ ದಿನಾಂಕ:26.09.2008 ರಂದು ಪತ್ರ ಬರೆಯಲಾಗಿದ್ದು, ಇದುವರೆವಿಗೂ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ವಾಹನ ಮಾಲೀಕರಾಗಲೀ/ಆರೋಪಿಗಳಾಗಲೀ ವಾಹನಗಳ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34, 38(ಎ)ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನಗಳ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/216/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಉದಯಗಿರಿ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 175/2008, ದಿನಾಂಕ:13.09.2008 ರಂದು ವಶಪಡಿಸಿಕೊಂಡ ಕೆಎಲ್–10/ಜಿ–1814 ನೋಂದಣಿ ಸಂಖ್ಯೆಯ ಆಟೋ ರಿಕ್ಷಾ ಹಾಗೂ ಕೆಎ–09/ಕ್ಯೂ–9013 ನೋಂದಣಿ ಸಂಖ್ಯೆ ಬಜಾಜ್ ಸ್ಕೂಟರ್ ವಾಹನಗಳನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ.ಮಂಜುನಾಥ್**

ಪಿ.ಆರ್.868

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/217/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು**: ಡಾ|| ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ನಿರೀಕ್ಷಕರು, ಮಂಡಿ ಪೊಲೀಸ್ ಠಾಣೆ, ಮೈಸೂರು. | **ವಿರುದ್ಧ** | ಶಿವಪ್ರಕಾಶ್ ಬಿನ್ ಚಿಕ್ಕಣ್ಣ ವಿದ್ಯಾರಣ್ಯಪುರಂ, ಮೈಸೂರು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:19.09.2008 ರಂದು ಬೆಳಿಗ್ಗೆ 10:30 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ನಗರ, ಇವರು ಮೈಸೂರು ನಗರ, ಮೈಸೂರು–ಶ್ರೀರಂಗಪಟ್ಟಣ ರಸ್ತೆಯ ಫೌಂಟೆನ್ ಸರ್ಕಲ್‌ನ ಹತ್ತಿರ ಕೆಎ–18/ಎಂ–2191 ನೋಂದಣಿ ಸಂಖ್ಯೆಯ ಟಾಟಾ ಸುಮೊ ವಾಹನದಲ್ಲಿ ಅಕ್ರಮವಾಗಿ 71.250 ಲೀ. ವಿವಿಧ ಮಾದರಿಯ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೇಲ್ಕಂಡ ವಾಹನ, ಆರೋಪಿ ಮತ್ತು ಮದ್ಯವನ್ನು ಮಂಡಿ ಪೊಲೀಸ್ ಠಾಣೆಯ ಆರಕ್ಷಕ ನಿರೀಕ್ಷಕರಿಗೆ ಹಾಜರುಪಡಿಸಿ, ಮುಂದಿನ ಕ್ರಮ ಜರುಗಿಸಲು ಕೋರಿರುವ ಮೇರೆಗೆ ಮೊಕದ್ದಮೆ ಸಂಖ್ಯೆ: 200/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(ಎಫ್), 32, 34, 36ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 23.09.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ: 30–09–2008 ರಂದು ಮೈಸೂರು ವಲಯ ನಂ.1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ **'ಬಿ'** ವಹಿಗಾಗಿ ಚಿಕ್ಕಮಗಳೂರು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:30.09.2008ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 36ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/217/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಮಂಡಿ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 200/2008, ದಿನಾಂಕ:19.09.2008 ರಂದು ವಶಪಡಿಸಿಕೊಂಡ ಕೆಎ–18/ಎಂ–2191 ನೋಂದಣಿ ಸಂಖ್ಯೆಯ ಟಾಟಾ ಸುಮೊ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.867 ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/150/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್.ಪೊಲೀಸ್ ಠಾಣೆ, ಮೈಸೂರು. | **ವಿರುದ್ಧ** | ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:29.09.2008 ರಂದು ಬೆಳಗಿನ ಜಾವ 04:00 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ನಗರ, ಇವರು ಮೈಸೂರು ನಗರ, ಹರಿಶ್ಚಂದ್ರ ರಸ್ತೆಯಲ್ಲಿ ಕೆಎ–13/ಹೆಚ್–218 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಅಕ್ರಮವಾಗಿ 34.560 ಲೀ. ವಿವಿಧ ಮಾದರಿಯ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೇಲ್ಕಂಡ ವಾಹನ, ಆರೋಪಿ ಮತ್ತು ಮದ್ಯವನ್ನು ಕೆ.ಆರ್. ಪೊಲೀಸ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಹಾಜರುಪಡಿಸಿ, ಮುಂದಿನ ಕ್ರಮ ಜರುಗಿಸಲು ಕೋರಿರುವ ಮೇರೆಗೆ ಮೊಕದ್ದಮೆ ಸಂಖ್ಯೆ:182/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 13(ಎಫ್), 32, 34, 36ರ' ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 03.10.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:15.10.2008 ಮೈಸೂರು ವಲಯ ನಂ.4ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಹಾಸನ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿ: 15–10–2008 ಮತ್ತು 27–11–2008 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34, 36ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ /

ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/150/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್. ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 182/2008, ದಿನಾಂಕ:29.09.2008 ರಂದು ವಶಪಡಿಸಿಕೊಂಡ ಕೆಎ–13/ಹೆಚ್–218 ನೋಂದಣಿ ಸಂಖ್ಯೆಯ ಬಜಾಜ್ ಚೇತಕ್ ಸ್ಕೂಟರ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ|| ವೈ.ಮಂಜುನಾಥ್**

ಪಿ.ಆರ್.872 ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ

ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/383/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ|| ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| ಪಿರ್ಯಾದುದಾರರು | ವಿರುದ್ಧ | ಪ್ರತಿವಾದಿ / ಆರೋಪಿ |
|---|---|---|
| ಆರಕ್ಷಕ ಉಪ ನಿರೀಕ್ಷಕರು, ವಿ.ವಿ.ಪುರಂ ಪೊಲೀಸ್ ಠಾಣೆ, ಮೈಸೂರು. | | ಆರೋಪಿ ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:07.01.2009 ರಂದು ಬೆಳಿಗ್ಗೆ 07:30 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ನಗರ, ಇವರು ಮೈಸೂರು ನಗರ, ಕೆ.ಆರ್.ಎಸ್. ರಸ್ತೆ, ಕುಂಬಾರಕೊಪ್ಪಲು ಗೇಟ್, ಬೃಂದಾವನ ಬಡಾವಣೆ ಮುಖ್ಯ ರಸ್ತೆಯಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಮುಂಭಾಗದಲ್ಲಿ ಕೆಎ–05/ಇಸಿ–87777 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್ ವಾಹನದಲ್ಲಿ ಅಕ್ರಮವಾಗಿ 7.380 ಲೀ. ವಿವಿಧ ಮಾದರಿಯ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಫ್ತು ಮಾಡಿ, ಸದರಿ ವಾಹನ ಮತ್ತು ಮದ್ಯವನ್ನು ವಿ.ವಿ.ಪುರಂ ಪೊಲೀಸ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಹಾಜರುಪಡಿಸಿ, ಮುಂದಿನ ಕ್ರಮ ಜರುಗಿಸಲು ಕೋರಿರುವ ಮೇರೆಗೆ ಮೊಕದ್ದಮೆ ಸಂಖ್ಯೆ: 01/2009 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:09.01.2009 ರಂದು ಕೋರಿರುತ್ತಾರೆ. ಅಂತೆಯೇ ಅದೇ ದಿನದಂದು ಮೈಸೂರು ವಲಯ ನಂ.2ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಬೆಂಗಳೂರು ದಕ್ಷಿಣ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:12.02.2009 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಗಳಿಗೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ

ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/383/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ವಿ.ವಿ.ಪುರಂ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 01/2009, ದಿನಾಂಕ:07.01.2009 ರಂದು ವಶಪಡಿಸಿಕೊಂಡ ಕೆಎ–05/ಇಸಿ–8777 ನೋಂದಣಿ ಸಂಖ್ಯೆ ಬಜಾಜ್ ಸ್ಕೂಟರ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.875

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/5/(ಪೊಲೀಸ್)/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ಪೊಲೀಸ್ ಠಾಣೆ, ಹೆಚ್.ಡಿ.ಕೋಟೆ ತಾಲ್ಲೂಕು. | | ಆರೋಪಿ ಪರಾರಿಯಾಗಿರುತ್ತಾನೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:03.05.2008 ರಂದು ಬೆಳಿಗ್ಗೆ 05:00 ಗಂಟೆಯ ಸಮಯದಲ್ಲಿ ಆರಕ್ಷಕ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ, ಇವರು ಹೆಚ್.ಡಿ.ಕೋಟೆ ತಾಲ್ಲೂಕು, ಗಂಗಡಹೊಸಹಳ್ಳಿ ಗ್ರಾಮದ ಬಳಿ ಕೆಎ–01/ಎನ್–1661 ನೋಂದಣಿ ಸಂಖ್ಯೆಯ ಮಾರುತಿ ಕಾರ್ ವಾಹನವನ್ನು ಅಮಾನತ್ತುಪಡಿಸಿಕೊಂಡು, ಹೆಚ್.ಡಿ.ಕೋಟೆ ಪೊಲೀಸ್ ಠಾಣೆಯಲ್ಲಿ ಹಾಜರುಪಡಿಸಿ, ಪಂಚರ ಸಮಕ್ಷಮ ವಾಹನವನ್ನು ಪರಿಶೀಲಿಸಲಾಗಿ, ಒಟ್ಟು 14 ರ.ಪೆ.ಗಳಲ್ಲಿ. 11.960 ಲೀ. ವಿವಿಧ ಮಾದರಿಯ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ, ಮತ್ತು ಮದ್ಯವನ್ನು ಜಪ್ತು ಮಾಡಿ, ಸದರಿ ವಾಹನ ಮತ್ತು ಮದ್ಯವನ್ನು ಹೆಚ್.ಡಿ.ಕೋಟೆ ಪೊಲೀಸ್ ಠಾಣೆಯ ಆರಕ್ಷಕ ಉಪ ನಿರೀಕ್ಷಕರಿಗೆ ಹಾಜರುಪಡಿಸಿ, ಮುಂದಿನ ಕ್ರಮ ಜರುಗಿಸಲು ಕೋರಿರುವ ಮೇರೆಗೆ ಮೊಕದ್ದಮೆ ಸಂಖ್ಯೆ: 169/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:21.10.2008 ರಂದು ಕೋರಿರುತ್ತಾರೆ. ಅಂತೆಯೇ ಅದೇ ದಿನದಂದು ಹೆಚ್.ಡಿ.ಕೋಟೆ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಬೆಂಗಳೂರು ಕೇಂದ್ರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:21.10.2008 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34ರ ಅಡಿಯಲ್ಲಿ ಪತ್ತೆ

ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (14) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/5(ಪೊಲೀಸ್)/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಹೆಚ್.ಡಿ.ಕೋಟೆ ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 169/2008, ದಿನಾಂಕ:03.05.2008 ರಂದು ವಶಪಡಿಸಿಕೊಂಡ ಕೆಎ–01/ಎನ್–1661 ನೋಂದಣಿ ಸಂಖ್ಯೆ ಮಾರುತಿ ಕಾರ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.869

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/255/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ನಜ಼ರ್‌ಬಾದ್ ಪೊಲೀಸ್ ಠಾಣೆ, ಮೈಸೂರು ನಗರ. | | ಆರೋಪಿಗಳು ಪರಾರಿಯಾಗಿರುತ್ತಾರೆ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:21/22.07.2008 ರಂದು ರಾತ್ರಿ 08–30 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ನಜ಼ರ್‌ಬಾದ್ ಪೊಲೀಸ್ ಠಾಣೆ, ಮೈಸೂರು ನಗರ ಇವರು ಮೈಸೂರು ನಗರದ ಯರಗನಹಳ್ಳಿ ಬಡಾವಣೆಯ ಪಾಪಣ್ಣ ಲೇಔಟ್‌ನ ಹಾಲಿನ ಶಿವಪ್ಪ ಎಂಬವರ ಮನೆಯ ಮುಂಭಾಗಕ್ಕೆ ಹೋದಾಗ, ಆ ಸಂದರ್ಭದಲ್ಲಿ ಕರೆಂಟ್ ಇರಲಿಲ್ಲ. ಸದರಿ ಮನೆಯಲ್ಲಿದ್ದ ವ್ಯಕ್ತಿಗಳು ಆರಕ್ಷಕ ಇಲಾಖಾ ಅಧಿಕಾರಿಗಳನ್ನು ನೋಡಿ, ಪರಾರಿಯಾಗಿದ್ದು, ಮನೆಯನ್ನು ಪರಿಶೀಲಿಸಲಾಗಿ, 105.480 ಲೀ. ನಕಲಿ ಮದ್ಯ, 30 ಲೀ. ಬ್ಲೆಂಡ್ ಮದ್ಯ, 80 ಲೀ. ಮದ್ಯಸಾರ ಹಾಗೂ ನಕಲಿ ಮದ್ಯ ತಯಾರಿಸಲು ಬಳಸುವ ಪರಿಕರಗಳನ್ನು ಹೊಂದಿದ್ದು, ಇಂತಹ ನಕಲಿ ಮದ್ಯವನ್ನು ತಯಾರಿಸಿ, ಮಾರಾಟ / ಸಾಗಾಣಿಕೆಯ ಉಪಯೋಗಕ್ಕಾಗಿ 1) ಕೆಎ–09/ಇ–5185 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್, 2) ಕೆಎ–09/ಇಡಿ–9894 ನೋಂದಣಿ ಸಂಖ್ಯೆಯ ಬಜಾಜ್ ಸಿಟಿ–110, 3) ಕೆಎ–10/ಇಟಿ–9633 ನೋಂದಣಿ ಸಂಖ್ಯೆಯ ಬಜಾಜ್ ಸಿಟಿ–100, 4) ಕೆಎ–04/ಇಎ–5132 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಕೂಟಿ, 5) ಸಿಟಿಪಿ–6241 ನೋಂದಣಿ ಸಂಖ್ಯೆಯ ಮಾರುತಿ–800 ಕಾರ್ ವಾಹನಗಳು ಮತ್ತು ಅಬಕಾರಿ ವಸ್ತುಗಳನ್ನು ಜಪ್ತುಪಡಿಸಿ, ಮೊಕದ್ದಮೆ ಸಂಖ್ಯೆ: 224/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ

ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:23.10.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:30.10.2008 ರಂದು ಮೈಸೂರು ವಲಯ ನಂ.1ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನಗಳ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:30.10.2008 ರಂದು ಪತ್ರ ಬರೆಯಲಾಗಿರುತ್ತದೆ. ಮೈಸೂರು ವಲಯ ನಂ.1ರ ಅಬಕಾರಿ ಉಪ ನಿರೀಕ್ಷಕರು, ಕೆಎ–04/ಇಎ–5132 ವಾಹನದ 'ಬಿ' ವಹಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅದರಂತೆ ಕುಮಾರಿ ರೇಖಾ ಬಿನ್ ಮಹೇಂದ್ರ ಇವರಿಗೆ ಕಲಂ 43(ಬಿ) ರ ಅಡಿಯಲ್ಲಿ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿದ್ದು, ವಿಳಾಸದಲ್ಲಿ ಇಲ್ಲವೆಂಬ ಷರಾದೊಂದಿಗೆ ಅಂಚೆ ಇಲಾಖೆಯವರು ಈ ಪ್ರಾಧಿಕಾರಕ್ಕೆ ಹಿಂದಿರುಗಿಸಿರುತ್ತಾರೆ. ಇನ್ನುಳಿದ ವಾಹನಗಳಿಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಪ್ರಥಮ ಮಾಹಿತಿ ಮತ್ತು ಸ್ಥಳ ಮಹಜರ್‌ನ್ನು ಪರಿಶೀಲಿಸಲಾಗಿ, ಆರೋಪಿಗಳು ಪರಾರಿಯಾಗಿರುವುದಾಗಿ, ಮೊಕದ್ದಮೆ ದಾಖಲಾಗಿರುತ್ತದೆ. ಅಂದರೆ ಆರೋಪಿತರು ಇಲ್ಲದ ಪ್ರಕರಣಗಳಲ್ಲಿ ಪ್ರಕರಣ ದಾಖಲಾದ 30 ದಿನಗಳ ತರುವಾಯ ವಾಹನದ ಮಾಲೀಕತ್ವ ನಿರೂಪಿಸಲು ಯಾರೊಬ್ಬರು ಹಾಜರಾಗದ ಪಕ್ಷದಲ್ಲಿ ಅಂತಹ ವಾಹನಗಳನ್ನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುತ್ತದೆ.

ಸದರಿ ವಾಹನಗಳಿಗೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ತನ್ನದೆಂದಾಗಲೀ ಹಾಗೂ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (11) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನಗಳು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನಗಳ ಮಾಲೀಕರುಗಳಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/255/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಜರ್‌ಬಾದ್ ಪೊಲೀಸ್ ಠಾಣೆ, ಮೈಸೂರು ಸಿಟಿ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 224/2008, ದಿನಾಂಕ:21/22.07.2008 ರಂದು ವಶಪಡಿಸಿಕೊಂಡ 1) ಕೆಎ–09/ಇ–5185 ನೋಂದಣಿ ಸಂಖ್ಯೆಯ ಬಜಾಜ್ ಸ್ಕೂಟರ್, 2) ಕೆಎ–09/ಇಡಿ–9894 ನೋಂದಣಿ ಸಂಖ್ಯೆಯ ಬಜಾಜ್ ಸಿಟಿ–100, 3) ಕೆಎ–10/ಇಟಿ–9633 ನೋಂದಣಿ ಸಂಖ್ಯೆಯ ಬಜಾಜ್ ಸಿಟಿ–100, 4) ಕೆಎ–04/ಇಎ–5132 ನೋಂದಣಿ ಸಂಖ್ಯೆಯ ಟಿವಿಎಸ್ ಸ್ಕೂಟಿ, 5) ಸಿಟಿಓ–6241 ನೋಂದಣಿ ಸಂಖ್ಯೆಯ ಮಾರುತಿ–800 ಕಾರ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**

ಪಿ.ಆರ್.870

ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/381/2008-09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಪಿರಿಯಾಪಟ್ಟಣ ಪೊಲೀಸ್ ಠಾಣೆ, ಪಿರಿಯಾಪಟ್ಟಣ ತಾಲ್ಲೂಕು. | | ಮಹದೇವ ಬಿನ್ ರಂಗಸ್ವಾಮಿ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:16.12.2008 ರಂದು ಸಂಜೆ 06-30 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಪಿರಿಯಾಪಟ್ಟಣ ಪೊಲೀಸ್ ಠಾಣೆ ಇವರು, ಪಿರಿಯಾಪಟ್ಟಣ ತಾಲ್ಲೂಕು, ಪಿರಿಯಾಪಟ್ಟಣ ಟೌನ್, ಬೆಟ್ಟದಪುರ ಸರ್ಕಲ್‌ನಲ್ಲಿ ಕೆಎ-45/ಇ-7696 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೊಕದ್ದಮೆ ಸಂಖ್ಯೆ: 240/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14, 32, 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 23.12.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:07.01.2009 ರಂದು ಪಿರಿಯಾಪಟ್ಟಣ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:12.02.2009 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/381/2008-09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಪಿರಿಯಾಪಟ್ಟಣ ಪೊಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ. ವರದಿ ಸಂಖ್ಯೆ: 240/2008, ದಿನಾಂಕ:16.12.2008 ರಂದು ವಶಪಡಿಸಿಕೊಂಡ ಕೆಎ-45/ಇ-7696 ನೋಂದಣಿ ಸಂಖ್ಯೆಯ ಬಜಾಜ್ ಪಲ್ಸರ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್ ಹಾಗೂ
ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.871

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**
**ನಂ:ಎಸ್‌ಡಿಕೆ/229/ಡಿಟಿಸಿಆರ್/2003–2004, ದಿನಾಂಕ:20ನೇ ಮಾರ್ಚ್, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು:**
ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಉತ್ತರ ಪೊಲೀಸ್ ಠಾಣೆ, ಮಂಗಳೂರು.

**ಆರೋಪಿಗಳು:**
1. ಸತೀಶ್ ಬಿನ್ ಐತಪ್ಪ ಮೂಲ್ಯ,
ಶಾಂತಿನಗರ ಮನೆ, ಕಾವೂರು, ಮಂಗಳೂರು.
2. ದಯಾನಂದ, ಬಿನ್ ಸೇಸಪ್ಪ ಬಂಗೇರ,
ಕಂಬ್ಲಪದವು, ಪಾವೂರು ಪೋಸ್ಟ್, ಕೋಣಾಜೆ,
ಮಂಗಳೂರು.

**ವಾಹನದ ಮಾಲೀಕರು**
ಶ್ರೀ ರಾಜಕುಮಾರ್ ಬಿನ್ ವೀರಪ್ಪ,
ಹೋಟೆಲ್ ನಾರಾಯಣ, ದೇವಾಡಿಗ ಕಾಂಪೌಂಡ್,
ದೇರೆಬೈಲ್, ಕೊಂಚಾಡಿ, ಅಶೋಕನಗರ, ಮಂಗಳಾದೇವಿ,
ಮಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:31.03.2004 ರಂದು ದೊರೆತ ಖಚಿತ ವರ್ತಮಾನದ ಮೇರೆಗೆ ಮಂಗಳೂರು ಉತ್ತರ ಪೊಲೀಸ್ ಠಾಣೆಯ ಪೊಲೀಸ್ ಉಪ ನಿರೀಕ್ಷಕರು ಸಿಬ್ಬಂದಿಯೊಂದಿಗೆ ರಾತ್ರಿ ಸುಮಾರು 10.00 ಗಂಟೆ ವೇಳೆಗೆ ಮಂಗಳೂರು ನಗರದ ಕೆ.ಎಸ್.ರಾವ್ ರಸ್ತೆಯಲ್ಲಿ ಪ್ರಭಾತ್ ಟಾಕೀಸ್‌ನ ಎದುರುಗಡೆ ಕಾಯುತ್ತಿರುವಾಗ, ಸುಜಾತ ಹೋಟೇಲ್ ಕಡೆಯಿಂದ ಕೆ.ಎಸ್.ರಾವ್, ಹಂಪನಕಟ್ಟೆ ರಸ್ತೆ ಕಡೆಗೆ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966 ಚಾಲಕನು ಕಾರನ್ನು ಚಲಾಯಿಸಿಕೊಂಡು ವೇಗವಾಗಿ ಹೋಗುತ್ತಿದ್ದು, ಸಮವಸ್ತ್ರದಲ್ಲಿದ್ದ ಸಿಬ್ಬಂದಿಯವರನ್ನು ಕಂಡು ಸೂಚನೆ ನೀಡಿದರೂ ಸದರಿ ಕಾರಿನ ಚಾಲಕ ಕಾರನ್ನು ನಿಲ್ಲಿಸದೆ ಮುಂದಕ್ಕೆ ಚಲಾಯಿಸಿಕೊಂಡು ಹೋದಾಗ, ಪೊಲೀಸರು ಬೆನ್ನಟ್ಟಿ ಪೂಂಜಾ ಇಂಟರ್‌ನ್ಯಾಶನಲ್ ಹೋಟೇಲ್ ಎದುರುಗಡೆ ಅಡ್ಡವಾಗಿ ಕಾರನ್ನು ನಿಲ್ಲಿಸಿರುತ್ತಾನೆ. ಸಂಶಯ ಆಧಾರದ ಮೇಲೆ ಸದರಿ ಕಾರನ್ನು ಪರಿಶೀಲಿಸಿದಾಗ ಸದರಿ ಕಾರಿನಲ್ಲಿ ಮದ್ಯ ತುಂಬಿದ ರಟ್ಟಿನ ಪೆಟ್ಟಿಗೆಗಳು ಈ ಕೆಳಗಿನಂತೆ ಪತ್ತೆಯಾಗಿರುತ್ತದೆ.

**ಮದ್ಯದ ವಿವರ:**

1) ಒರಿಜಿನಲ್ ಚಾಯ್ಸ್ ವಿಸ್ಕಿ 10 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 180 ಎಂ.ಎಲ್.ನ 480 ಸೀಸೆಗಳು–86–400 ಲೀಟರ್ ಮದ್ಯ.

2) ಓಲ್ಡ್ ಮಾಂಕ್ ರಮ್ 6 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 180 ಎಂ.ಎಲ್.ನ 288 ಸೀಸೆಗಳು:51–840 ಲೀಟರ್ ಮದ್ಯ.

3) ಒರಿಜಿನಲ್ ಚಾಯ್ಸ್ ವಿಸ್ಕಿ 4 ರಟ್ಟಿನ ಪೆಟ್ಟಿಗೆಗಳಲ್ಲಿ ತಲಾ 750 ಎಂ.ಎಲ್.ನ 48 ಸೀಸೆಗಳು:36–000 ಲೀಟರ್ ಮದ್ಯ.

ಸದರಿ ಪ್ರತಿಯೊಂದು ರಟ್ಟಿನ ಪೆಟ್ಟಿಗೆಗಳಿಂದ ತಲಾ ಒಂದೊಂದರಂತೆ ಬಾಟ್ಲಿಯನ್ನು ಪ್ರತ್ಯೇಕವಾಗಿ ರಾಸಾಯನಿಕ ಪರೀಕ್ಷೆಗಾಗಿ ತೆಗೆಯಲಾಗಿದ್ದು, ಹಾಗೂ ಸೀಸೆಗಳ ಬಾಯನ್ನು ಬಿಳಿ ಬಟ್ಟೆಯಿಂದ ಕಟ್ಟಿ ಎಸ್.ಹೆಚ್.ಒ. ಅರಗು ಸೀಲ್ ಮಾಡಿರುತ್ತಾರೆ. ಹಾಗೆಯೇ ಪಂಚರನ್ನು ಬರಮಾಡಿಕೊಂಡು ಪಂಚಾಯತ್‌ದಾರರ ಸಹಿ ಇರುವ ಚೀಟಿಯನ್ನು ಅಂಟಿಸಿರುತ್ತಾರೆ. ವಾಹನವನ್ನು ಚಲಾಯಿಸುತ್ತಿದ್ದ ಆರೋಪಿಯ ಹೆಸರು ಮತ್ತು ವಿಳಾಸವನ್ನು ವಿಚಾರಿಸಿದಾಗ ತಾನು ಸತೀಶ್, ಬಿನ್ : ಐತಪ್ಪ ಮೂಲ್ಯ, ಶಾಂತಿನಗರ ಮನೆ, ಕಾವೂರು, ಮಂಗಳೂರು ಹಾಗೂ ಇನ್ನೊಬ್ಬ ವ್ಯಕ್ತಿ ದಯಾನಂದ, ಬಿನ್ ಸೇಸಪ್ಪ ಬಂಗೇರ,

ಕಂಬ್ಲಪದವು, ಪಾವೂರು ಪೋಸ್ಟ್, ಕೋಣಾಜೆ, ಮಂಗಳೂರು ಎಂದು ತಿಳಿಸಿರುತ್ತಾರೆ. ಸದರಿ ಮದ್ಯವನ್ನು ಸಾಗಾಣಿಕೆ ಮಾಡಲು ಪರವಾನಿಗೆ ಇದೆಯೇ ಎಂದು ವಿಚಾರಿಸಿದಾಗ, ತನ್ನ ಬಳಿ ಯಾವುದೇ ರಹದಾರಿ ಪತ್ರವಿಲ್ಲ ಎಂದು ತಿಳಿಸಿರುವ ಮೇರೆಗೆ, ಇದು ಅಕ್ರಮ ಮದ್ಯ ಸಾಗಾಟ ಮಾಡಿರುವುದು ಖಚಿತವಾಗಿರುವುದರಿಂದ, ನಂತರ ಪ್ರಕರಣದ ಆರೋಪಿಯಾದ ಶ್ರೀ ಸತೀಶ್ ಇವರ ಹೇಳಿಕೆಯ ಮೇರೆಗೆ ಫಿರ್ಯಾದುದಾರರು ಹಾಗೂ ಸಿಬ್ಬಂದಿಯವರ ದಿನಾಂಕ:01.04.2004ರಂದು ಬೆಳಿಗ್ಗೆ 1-00 ಗಂಟೆಗೆ ತಮ್ಮ ಇಲಾಖಾ ಜೀಪಿನಲ್ಲಿ ಕುಳ್ಳಿರಿಸಿ ಪಂಚರೊಂದಿಗೆ ಆರೋಪಿಯಾದ ಸತೀಶ್ ಇವರನ್ನು ಕೂಡಿಕೊಂಡು ಉರ್ವಸ್ಟೋರ್, ಕೂಳೂರು, ಪಣಂಬೂರು, ಸುರತ್ಕಲ್ ಜಂಕ್ಷನ್‌ನ ಎಡಭಾಗದ ಜನತಾ ಕಾಲೋನಿಯ ಮನೆಯ ಒಳಗೆ ತಪಾಸಣೆ ನಡೆಸಿದಾಗ, ಎರಡನೇ ಕೋಣೆಯಲ್ಲಿ ಅಕ್ರಮವಾಗಿ ನಕಲಿ ಮದ್ಯ ತಯಾರಿಸುವ ಈ ಕೆಳಕಂಡ ಸೊತ್ತುಗಳು ಪತ್ತೆಯಾದವು.

1) 35 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ 25 ಲೀ. ನಕಲಿ ಮದ್ಯ.
2) 35 ಲೀಟರ್ ಗಾತ್ರದ 2 ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಒಟ್ಟು 70 ಲೀಟರ್ ನಕಲಿ ಮದ್ಯ.
3) 35 ಲೀಟರ್ ಗಾತ್ರದ ಪ್ಲಾಸ್ಟಿಕ್ ಕ್ಯಾನ್‌ನಲ್ಲಿ ಒಟ್ಟು 70 ಲೀಟರ್ ಮದ್ಯಸಾರ.
4) ಮದ್ಯದ ಬಾಟಲ್‌ಗಳಿಗೆ ಹಾಕುವ ಕಾರ್ಕ್‌ಗಳು-1000
5) ಬಾಟಲ್‌ಗಳಿಗೆ ಮುಚ್ಚಳ ಹಾಕುವ ಕಾರ್ಕಿಂಗ್ ಮೆಶಿನ್-1
6) 35 ಲೀಟರ್ ಗಾತ್ರದ ಖಾಲಿ 30 ಪ್ಲಾಸ್ಟಿಕ್ ಕ್ಯಾನ್‌ಗಳು.

ಸದರಿ ಮೇಲಿನ ಸೊತ್ತುಗಳಲ್ಲಿ ರಾಸಾಯನಿಕ ಪರೀಕ್ಷೆಗಾಗಿ ಸ್ಯಾಂಪಲ್‌ಗಳನ್ನು ತೆಗೆದು, ಬಾಟಲ್‌ಗಳ ಬಾಯನ್ನು ಬಿಳಿ ಬಟ್ಟೆಯಿಂದ ಕಟ್ಟಿ ಎಸ್.ಹೆಚ್.ಒ. ಅರಗು ಸೀಲ್ ಮಾಡಿ, ಪಂಚರ ಸಹಿ ಇರುವ ಚೀಟಿಯನ್ನು ಅಂಟಿಸಿರುತ್ತಾರೆ. ಇದು ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 33, 38(ಎ) ಮತ್ತು 43(ಎ) ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿರುವುದರಿಂದ, ಆರೋಪಿಗಳ ವಿರುದ್ಧ ಮೊಕದ್ದಮೆ ಸಂಖ್ಯೆ:102/2004 ದಿನಾಂಕ:01.04.2004 ರ ಮೂಲಕ ಪ್ರಕರಣವನ್ನು ದಾಖಲಿಸಿ ಆರೋಪಿಗಳನ್ನು ಸ್ಥಳದಲ್ಲಿಯೇ ದಸ್ತಗಿರಿ ಮಾಡಿ ಮತ್ತು ಎಲ್ಲಾ ಸೊತ್ತುಗಳನ್ನು ಇಲಾಖಾ ವಶಕ್ಕೆ ವಶಪಡಿಸಿಕೊಂಡು ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ/229/ಡಿಟಿಸಿಆರ್/2003-04, ದಿನಾಂಕ:12.04.2004ರ ಆದೇಶದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಉತ್ತರ ಪೊಲೀಸ್ ಠಾಣೆ, ಮಂಗಳೂರು ಇವರು ವಶಪಡಿಸಿಕೊಂಡ ಸೊತ್ತುಗಳ ಪೂರ್ಣ ದಾಖಲಾತಿಗಳೊಂದಿಗೆ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರಿಗೆ ಹಸ್ತಾಂತರಿಸಲು ಅನುಮತಿ ನೀಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತುಪಡಿಸಲಾಗಿರುವ ಮಾರುತಿ 800 ಕಾರು ಸಂಖ್ಯೆ: ಕೆಎ-19-ಎನ್-5966 ರ ಆರ್.ಸಿ. ಮಾಲೀಕರೆಂದು ಶ್ರೀ ರಾಜ್‌ಕುಮಾರ್, ಬಿನ್ ವೀರಪ್ಪ, ಹೊಟೇಲ್ ನಾರಾಯಣ, ದೇವಾಡಿಗ ಕಾಂಪೌಂಡ್, ದೇರೆಬೈಲ್, ಕೊಂಚಾಡಿ, ಮಂಗಳೂರು ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ದಿನಾಂಕ:21.05.2004 ರಂದು ಅರ್ಜಿ ಸಲ್ಲಿಸಿ, ಸದರಿ ವಾಹನವನ್ನು ತಾತ್ಕಾಲಿಕ ನೆಲೆಯಲ್ಲಿ ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತಮ್ಮ ಅರ್ಜಿಯಲ್ಲಿ ಕೋರಿರುತ್ತಾರೆ.

ಸದರಿ ಅರ್ಜಿಯನ್ನು ಪರಿಶೀಲಿಸಿದ ಅಂದಿನ ಪ್ರಾಧಿಕಾರವು ಪ್ರಕರಣವನ್ನು ಪರಿಶೀಲಿಸಲಾಗಿ, ವಾಹನವನ್ನು ಅಕ್ರಮ ಮದ್ಯ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಸಾಬೀತಾಗಿದ್ದು, ಇದಲ್ಲದೆ ಪ್ರಕರಣದ ಆರೋಪಿಯಾದ ಸತೀಶ್ ಇವರ ಹೇಳಿಕೆಯಂತೆ ಸುರತ್ಕಲ್ ಕಾನ ಜನತಾ ಕಾಲೋನಿಯಲ್ಲಿ ಅಕ್ರಮ ನಕಲಿ ಮದ್ಯ ತಯಾರಿಕಾ ಘಟಕವನ್ನು ಪತ್ತೆ ಹಚ್ಚಿ, ಮದ್ಯಸಾರ, ನಕಲಿ ಮದ್ಯ ತಯಾರಿಕಾ ಯಂತ್ರ ಮತ್ತು ಉಪಕರಣಗಳನ್ನು ಜಪ್ತುಪಡಿಸಲಾಗಿರುತ್ತದೆ. ಅದಲ್ಲದೆ ಅರ್ಜಿದಾರರಾದ ಶ್ರೀ ರಾಜ್‌ಕುಮಾರ್ ದಿನಾಂಕ:18.12.2003 ರಂದು ತನ್ನ ವಾಹನವನ್ನು ಸತೀಶ್ ಎಂಬವರಿಗೆ ಮಾರಾಟ ಮಾಡಿ ವಾಹನವನ್ನು ಹಸ್ತಾಂತರಿಸಲಾಗಿರುತ್ತದೆ. ಶ್ರೀ ಚೌಧುರಿಯವರ 1938ನೇ ಮೋಟಾರು ವೆಹಿಕಲ್ಸ್ ಆ್ಯಕ್ಟ್‌ನ ಪುಟ ಸಂಖ್ಯೆ:90ರಲ್ಲಿ ವ್ಯಾಖ್ಯಾನಿಸಿರುವಂತೆ ವಾಹನವನ್ನು ಮಾರಾಟ ಮಾಡಿ ಹಸ್ತಾಂತರಿಸಿದಲ್ಲಿ, ನೋಂದಣಿ ಪುಸ್ತಕದಲ್ಲಿ ವರ್ಗಾವಣೆಯಾಗದಿದ್ದರೂ ವಾಹನವನ್ನು ಖರೀದಿಗೆ ಪಡೆದುಕೊಳ್ಳುವವರು ವಾಹನದ ಮಾಲೀಕರಾಗಿರುತ್ತಾರೆ ಈ ಕಾರಣದಿಂದ ಶ್ರೀ ರಾಜ್‌ಕುಮಾರ್ ಇವರು ದಿನಾಂಕ:18.12.2003 ರಿಂದ ವಾಹನ ಮಾಲೀಕರಾಗಿರುವುದಿಲ್ಲ. ಅಲ್ಲದೆ ಈ ಪ್ರಕರಣದಲ್ಲಿ ಆರೋಪಿ ಸತೀಶ್ ಇವರು ವಾಹನ ಮಾಲೀಕರಾಗಿದ್ದು, ವಾಹನವನ್ನು ತನ್ನ ಸುಪರ್ಧಿಯಲ್ಲಿಟ್ಟುಕೊಂಡು ತನ್ನ ತಿಳುವಳಿಕೆಯಿಂದಲೇ ಅಕ್ರಮ ಮದ್ಯವನ್ನು ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ, ಶ್ರೀ ರಾಜ್‌ಕುಮಾರ್ ಇವರು ಮಧ್ಯಂತರ ತಾತ್ಕಾಲಿಕ ಬಿಡುಗಡೆಗಾಗಿ ಸಲ್ಲಿಸಿರುವ ಅರ್ಜಿಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ. ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ: ಎಸ್‌ಡಿಕೆ/229/ಡಿಟಿಸಿಆರ್/2003-04 ದಿನಾಂಕ:09.09.2004 ರ ಆದೇಶದಲ್ಲಿ ತಿರಸ್ಕರಿಸಲಾಗಿದೆ.

ಈ ಪ್ರಾಧಿಕಾರದಿಂದ ಅರ್ಜಿದಾರರಿಗೆ ಹಾಗೂ ಆರೋಪಿಗಳಿಗೆ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43(ಬಿ) ರಂತೆ ಕಾರಣ ಕೇಳಿ ನೋಟೀಸುಗಳನ್ನು ನೋಂದಣಿ ಅಂಚೆ ಮೂಲಕ ದಿನಾಂಕ:14.10.2004 ರಂದು ನೀಡಲಾಗಿದ್ದು, ಸದರಿ ನೋಟೀಸುಗಳನ್ನು ಅರ್ಜಿದಾರರು ಹಾಗೂ ಆರೋಪಿಗಳು ಸ್ವೀಕರಿಸಿದ ಸ್ವೀಕೃತ ರಶೀದಿಯು ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ.

ತನಿಖಾಧಿಕಾರಿಯಾದ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರ ತನಿಖಾ ವರದಿ ಸಂಖ್ಯೆ: ಹೆಚ್‌ಕೆಆರ್/ಸಿಆರ್ಎಂ/19/2003–04 ದಿನಾಂಕ:20.11.2004ರ ವರದಿಯಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದ್ದು, ಒರಿಜಿನಲ್ ಚಾಯ್ಸ್ ವಿಸ್ಕಿ ಇದರ ಮದ್ಯಸಾರ ಪ್ರಮಾಣ ಶೇ.36% ಮತ್ತು ಓಲ್ಡ್ ಮಾಂಕ್ ರಮ್ ಇದರ ಮದ್ಯಸಾರ ಪ್ರಮಾಣ ಶೇ.32 ಹಾಗೂ ಚಿಲ್ಲರೆ ಮದ್ಯದ ಮದ್ಯಸಾರ ಪ್ರಮಾಣ ಶೇ.35% ಮತ್ತು ಮದ್ಯಸಾರದ ಮದ್ಯಸಾರ ಪ್ರಮಾಣ ಶೇ.93% ಇರುವುದಾಗಿ ದೃಢೀಕರಣ ಪತ್ರ ನೀಡಿರುತ್ತಾರೆ. ಸದರಿ ಮದ್ಯ ಹಾಗೂ ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವು ಮಾನವನ ಸೇವನೆಗೆ ಯೋಗ್ಯವಲ್ಲವಾಗಿರುವುದರಿಂದ ನಾಶಪಡಿಸಲು ಹಾಗೂ ಮದ್ಯಸಾರವನ್ನು ಸಾರಾಯಿ ಸಂಸ್ಕರಣ ಘಟಕ, ಮಂಗಳೂರು ಇವರಿಗೆ ಹಂಚಿಕೆ ಮಾಡಲು ಆದೇಶ ನೀಡಬೇಕೆಂದು ಶಿಫಾರಸು ಮಾಡಿರುತ್ತಾರೆ.

ತನಿಖಾಧಿಕಾರಿಯವರ ಶಿಫಾರಸ್ಸಿನ ಮೇರೆಗೆ ಅಂದಿನ ಪ್ರಾಧಿಕಾರದ ಆದೇಶ ಸಮ ಸಂಖ್ಯೆ: ದಿನಾಂಕ:29.11.2004ರ ಆದೇಶದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966 ನ್ನು ಹೊರತುಪಡಿಸಿ, ಉಳಿದ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಸೊತ್ತುಗಳ ಪೈಕಿ ಮದ್ಯ ಮತ್ತು ರಮ್ ದುರ್ಬಲವಾಗಿದ್ದು, ಮಾನವನ ಸೇವನೆಗೆ ಯೋಗ್ಯವಾಗಿಲ್ಲದಿರುವುದರಿಂದ ಮದ್ಯ, ಕಾರ್ಕಿಂಗ್ ಮೆಶಿನ್ ಮತ್ತು ಕಾರ್ಕ್‌ಗಳನ್ನು ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರ ಸಮಕ್ಷಮ ಸೂಕ್ತ ಮಹಜರು ಜರುಗಿಸಿ ನಾಶಪಡಿಸಲು, ಮದ್ಯಸಾರವನ್ನು ಸಾರಾಯಿ ತಯಾರಿಕೆಗೆ ಯೋಗ್ಯವಾಗಿರುವುದರಿಂದ, ಸಾರಾಯಿ ಸಂಸ್ಕರಣ ಘಟಕ, ಮಂಗಳೂರು ಇವರಿಗೆ ಹಂಚಿಕೆ ಮಾಡಲು, ಉಳಿದ ಸೊತ್ತುಗಳನ್ನು ಬಹಿರಂಗ ಹರಾಜಿನಲ್ಲಿ ವಿಲೇವಾರಿಗೊಳಿಸಲು ಆದೇಶಿಸಿರುತ್ತಾರೆ.

ಅರ್ಜಿದಾರರಾದ ಶ್ರೀ ರಾಜ್ ಕುಮಾರ್ ಇವರು ಈ ಪ್ರಾಧಿಕಾರದ ಆದೇಶ ಸಂಖ್ಯೆ: ದಿನಾಂಕ:09.09.2004 ರ ತಿರಸ್ಕರಿಸಿದ ಆದೇಶದ ವಿರುದ್ಧ ಮಾನ್ಯ ಪ್ರಿನ್ಸಿಪಲ್ ಸೆಷನ್ ಜಡ್ಜ್, ದ.ಕ. ಜಿಲ್ಲೆ, ಮಂಗಳೂರು ಇವರಲ್ಲಿ ಮೇಲ್ಮನವಿಯನ್ನು ಸಲ್ಲಿಸಿ, ಸದರಿ ನ್ಯಾಯಾಲಯದ ಕ್ರಿಮಿನಲ್ ಅಪೀಲ್ ಸಂಖ್ಯೆ: 360/2004 ದಿನಾಂಕ:11.01.2005ರ ಆದೇಶದಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966 ಕ್ಕೆ ಸಂಬಂಧಿಸಿ ಅರ್ಜಿದಾರರು ಈ ಪ್ರಾಧಿಕಾರಕ್ಕೆ ರೂ.40,000/– ಬ್ಯಾಂಕ್ ಗ್ಯಾರಂಟಿ ಹಾಗೂ ರೂ.1,00,000/– ಇಂಡೆಮ್ನಿಟಿ ಬಾಂಡ್ ಇದಕ್ಕೆ ಸಮನಾಗಿ ಒಬ್ಬ ಜಾಮೀನುದಾರರನ್ನು ನೀಡಬೇಕೆಂದು ಆದೇಶ ನೀಡಿರುತ್ತಾರೆ. ಸದರಿ ಆದೇಶದ ಅನುಸಾರ ಅರ್ಜಿದಾರರು ಈ ಪ್ರಾಧಿಕಾರಕ್ಕೆ ದಿನಾಂಕ:10.02.2005 ರಂದು ತಮ್ಮ ವಕೀಲರ ಮುಖಾಂತರ ಕಾರ್ಪೊರೇಶನ್ ಬ್ಯಾಂಕ್, ಕೊಡಿಯಾಲ್ ಬೈಲ್, ಮಂಗಳೂರು ಇವರಿಂದ ಪಡೆದ ರೂ.40,000/– ಬ್ಯಾಂಕ್ ಗ್ಯಾರಂಟಿ ಹಾಗೂ ರೂ.1,00,000/– ಇಂಡೆಮ್ನಿಟಿ ಬಾಂಡ್ ಮತ್ತು ಇದಕ್ಕೆ ಸಮನಾದ ಜಾಮೀನುದಾರರಾದ ಶ್ರೀ ಪುರುಷ, ಬಿನ್ ದೋಗ್ರ, ಅಂಬೂರಿ ಮನೆ, ಕೆಸರುಗದ್ದೆ ಪೋಸ್ಟ್, ಬೆಳುವಾಯಿ ಗ್ರಾಮ, ಮಂಗಳೂರುರವರು ತಮ್ಮ ಆರ್.ಟಿ.ಸಿ. ಯೊಂದಿಗೆ ಸಲ್ಲಿಸಿರುವುದರಿಂದ, ಈ ಪ್ರಾಧಿಕಾರದ ಮಧ್ಯಂತರ ಆದೇಶ ಸಂಖ್ಯೆ: ಎಸ್‌ಡಿಕೆ/229/ಡಿಟಿಸಿಆರ್/2003–04 ದಿನಾಂಕ:11.02.2005ರ ಆದೇಶದಲ್ಲಿ ವಾಹನ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ತಾತ್ಕಾಲಿಕ ನೆಲೆಯಲ್ಲಿ ಇದರ ಆರ್.ಸಿ. ಮಾಲೀಕರ ವಶಕ್ಕೆ ಬಿಡುಗಡೆಗೊಳಿಸಲು ಆದೇಶಿಸಿದೆ.

ನಂತರ ಪ್ರಕರಣದ ವಿಚಾರಣೆಯನ್ನು ಆರಂಭಿಸಿ, ಸರ್ಕಾರದ ಅಭಿಯೋಜನೆ ಪರ ಎರಡು ಸಾಕ್ಷಿಗಳ ಹೇಳಿಕೆಗಳನ್ನು ಪಡೆಯಲಾಗಿದೆ. ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ವಾಹನ ಮಾಲೀಕರ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳ ಮೇಲೆ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸಬೇಕಾಗಿರುವುದು ಅಗತ್ಯವಾಗಿರುವುದು ಪರಿಶೀಲನಾ ಅಂಶಗಳು ಈ ಕೆಳಗಿನಂತಿರುತ್ತದೆ.

1) ದಿನಾಂಕ:31.03.2004 ರಂದು ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966ರಲ್ಲಿ ಅಕ್ರಮ ಮದ್ಯ ಸಾಗಾಟ ಮಾಡಲಾಗಿತ್ತೇ?

2) ಸದರಿ ವಾಹನದಲ್ಲಿ ಅಕ್ರಮ ಮದ್ಯವನ್ನು ತನ್ನ ತಿಳುವಳಿಕೆಗೆ ಬಾರದೆ ಮಾಡಲಾಗಿತ್ತೇ? ಎಂಬುವುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?

3) ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಲಾಗಿದೆ.

ಒಂದನೇ ಅಂಶವನ್ನು ಗುಣಾತ್ಮಕವಾಗಿ ಹೌದು ಎಂದು. ಎರಡನೇ ಅಂಶವನ್ನು ಸಕರಾತ್ಮಕವಾಗಿ ಇಲ್ಲವೆಂದು ಹಾಗೂ ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸಾ:1**

ಶ್ರೀಮತಿ ಪ್ರೇಮ ಜಿ. ಉಡ್ವಿಕಾರ್, ನಿವೃತ್ತ ಅಬಕಾರಿ ನಿರೀಕ್ಷಕರು, ಹಂಪನಕಟ್ಟ ವಲಯ ಇವರು ಈ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಇವರು ದಿನಾಂಕ:03.03.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಿ ಹೇಳಿಕೆಯನ್ನು ನೀಡಿರುತ್ತಾರೆ.

ತಾನು ತಕ್ಷೀರಿಗೆ ಸಂಬಂಧಿಸಿದ ದಾಖಲೆ ಪತ್ರಗಳನ್ನು ಹಾಗೂ ಮುದ್ದೆಮಾಲನ್ನು ದಿನಾಂಕ:17.04.2004 ರಂದು ಮಂಗಳೂರು ಉತ್ತರ ಪೊಲೀಸ್ ಠಾಣೆಯ ಅಧಿಕಾರಿಗಳಿಂದ ಪಡೆದುಕೊಂಡಿರುತ್ತೇನೆ. ತಾನು ದಿನಾಂಕ:28.04.2004 ರಂದು ಈ ಪ್ರಕರಣಕ್ಕೆ ಸಂಬಂಧಿಸಿದ ಒಟ್ಟು 5 ಮಾದರಿ ಸೀಸೆಗಳನ್ನು ರಾಸಾಯನಿಕ ತಜ್ಞರಿಗೆ ತನ್ನ ಅಬಕಾರಿ ರಕ್ಷಕರ ಮೂಲಕ ಕಳುಹಿಸಿರುತ್ತೇನೆ. ಅವರಿಂದ ದಿನಾಂಕ:17.07.2004 ರಂದು ತಜ್ಞರು ಪರಿಶೀಲಿಸಿದ ಬಾಟ್ಲಿ ಹಾಗೂ ವರದಿಯನ್ನು ಪಡೆದುಕೊಂಡಿರುತ್ತೇನೆ. ನಂತರ ಮುಂದಿನ ತನಿಖೆಗಾಗಿ ಅಬಕಾರಿ ನಿರೀಕ್ಷಕರು, ಕುಲಶೇಖರ ವಲಯ ಇವರಿಗೆ ಹಸ್ತಾಂತರಿಸಿರುತ್ತೇನೆ. ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತ, ಮೊಕದ್ದಮೆಗೆ ಸಂಬಂಧಿಸಿದಂತೆ ಒಟ್ಟು 25 ಮಾದರಿ ಬಾಟ್ಲಿಗಳನ್ನು ಮುಂದಿನ ತನಿಖೆಗಾಗಿ ಪಡೆದುಕೊಂಡಿರುತ್ತೇನೆ. ಸದರಿ 25 ಬಾಟ್ಲಿಗಳನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ತಂದು, ಒಂದೊಂದಾಗಿ ತನಗೆ ತೋರಿಸಿ ಹಸ್ತಾಂತರಿಸಿರುತ್ತಾರೆ. ಸದರಿ ಬಾಟ್ಲಿಗಳಿಗೆ ಪೊಲೀಸ್ ಇಲಾಖೆಯಿಂದಲೇ ಮೊಹರು ಮಾಡಲಾಗಿದ್ದು, ಸದರಿ ಮೊಹರು ಹೊಂದಿದ ಬಾಟ್ಲಿಗಳನ್ನು ತಾನು ಕೋರಿಕೆ ಪತ್ರದೊಂದಿಗೆ ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿರುತ್ತೇನೆ. ವಾಹನದ ಮಾಲೀಕತ್ವವನ್ನು ದೃಢೀಕರಿಸಿಕೊಳ್ಳಲು ತಾನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ಕಛೇರಿಗೆ ಬಂದು ವಿವರಗಳನ್ನು ತರಿಸಿಕೊಂಡಿರುತ್ತೇನೆ. ತಾನು ದಿನಾಂಕ:18.12.2003 ರಂದು ವಾಹನ ಮಾಲೀಕರು ಸದರಿ ವಾಹನವನ್ನು ಸತೀಶ್ ಎಂಬುವರಿಗೆ ಮಾರಾಟ ಮಾಡಿರುತ್ತಾರೆ ಎಂದರೆ ತನಗೆ ಜ್ಞಾಪನವಿರುವುದಿಲ್ಲ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

**ಪ್ರಾ.ಸಾ:2**

ಶ್ರೀ ಜ್ಞಾನದೇವ್ ಕೆ. ಅಬಕಾರಿ ರಕ್ಷಕ, ಕೊಡಿಯಾಲ್ ಉಪವಲಯ ಇವರು ದಿನಾಂಕ:03.03.2005 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಇವರು ಪ್ರಕರಣದ ಕೆಮಿಕಲ್ ಕ್ಯಾರಿಯರ್ ಆಗಿದ್ದು, ತಾನು ಅಬಕಾರಿ ನಿರೀಕ್ಷಕರು ಕೊಟ್ಟಿರುವ ಸ್ಯಾಂಪಲ್‌ಗಳನ್ನು ರಾಸಾಯನಿಕ ತಜ್ಞರು, ಮಂಗಳೂರು ಇವರಿಗೆ ತಲುಪಿಸಿರುತ್ತೇನೆ. ಅವರು ದಿನಾಂಕ:20.07.2004 ರಂದು ತಜ್ಞರು ಪರಿಶೀಲಿಸಿದ ಸದರಿ ಬಾಟಲ್‌ಗಳನ್ನು ಮತ್ತು ವರದಿಯನ್ನು ಅಬಕಾರಿ ನಿರೀಕ್ಷಕರಿಗೆ ತಲುಪಿಸಿರುತ್ತೇನೆ. ತಜ್ಞರ ವರದಿಯ ಛಾಯಾ ಪ್ರತಿಯನ್ನು ನಿಶಾನೆ ಪಿ–1 ಎಂದು ಗುರುತಿಸಲಾಯಿತು. ಅರ್ಜಿದಾರರ ಪಾಟೀ ಸವಾಲಿಗೆ ಉತ್ತರಿಸುತ್ತ, ತಾನು 25 ಬಾಟಲ್‌ಗಳನ್ನು ರಾಸಾಯನಿಕ ತಜ್ಞರಿಗೆ ಕೊಂಡು ಹೋಗಿರುತ್ತೇನೆ. ಸದರಿ ಬಾಟಲ್‌ಗಳು ಒಂದೇ ಪೆಟ್ಟಿಗೆಯಲ್ಲಿ ತನಗೆ ನೀಡಿದ್ದರು. ಸದರಿ ಬಾಟಲ್‌ಗಳನ್ನು ತಾನೇ ಎಣಿಸಿ ಪೆಟ್ಟಿಗೆಯಲ್ಲಿ ಹಾಕಿಕೊಂಡಿರುತ್ತೇನೆ. ತಾನು ರಾಸಾಯನಿಕ ತಜ್ಞರಿಗೆ ಬಾಟಲ್‌ಗಳನ್ನು ನೀಡಿರುವುದಿಲ್ಲ ಎಂದರೆ ಸರಿಯಲ್ಲ. ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಕರಣದ ಫಿರ್ಯಾದುದಾರರು ಹಾಗೂ ಪಂಚರಿಗೆ ಈ ಪ್ರಾಧಿಕಾರದಿಂದ ದಿನಾಂಕ:03.03.2006,, 07.04.2006, 28.04.2006, 15.02.2007, 08.03.2007, 26.04.2007, 16.06.2007, 16.08.2007, 11.10.2007, 12.12.2007, 27.02.2008, 09.04.2008, 18.06.2008, 20.08.2008, 05.11.2008 ರಂದು ಪೊಲೀಸ್ ಅಧೀಕ್ಷಕರವರ ಮುಖಾಂತರ ಹಾಜರಾತಿ ನೋಟೀಸು ನೀಡಿದರೂ, ಈ ಪ್ರಾಧಿಕಾರದ ಮುಂದೆ ಇದುವರೆಗೂ ಸಾಕ್ಷಿ ನುಡಿಯಲು ಹಾಜರಾಗಿರುವುದಿಲ್ಲ.

**ಪಿಡಬ್ಲ್ಯೂ–1:**

ಶ್ರೀ ರಾಜ್‌ಕುಮಾರ್ ಬಿನ್ ವೀರಪ್ಪ ಬಂಗೇರ, ಮಂಗಳೂರು ಇವರು ವಾಹನದ ನೋಂದಣಿ ಮಾಲೀಕರಾಗಿದ್ದು, ಇವರು ದಿನಾಂಕ:04.03.2009ರಂದು ಹಾಜರಾಗಿ ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿದಿರುತ್ತಾರೆ. ತಾನು ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966 ರ ನೋಂದಣಿ ಮಾಲೀಕರಾಗಿದ್ದು, ಸದರಿ ಕಾರನ್ನು ಮಾರಾಟ ಮಾಡುವುದಕ್ಕೋಸ್ಕರ ಸತೀಶ್ ಕುಲಾಲ್ ಇವರೊಂದಿಗೆ ದಿನಾಂಕ:18.12.2003 ರಂದು ಮಾರಾಟ ಕರಾರು ಪತ್ರ ಮಾಡಿಕೊಂಡಿರುತ್ತೇನೆ. ತನ್ನ ವಾಹನವನ್ನು ದಿನಾಂಕ:18.12.2003 ರಂದು ಸತೀಶ್ ಕುಲಾಲ್ ಇವರ ಸುಪರ್ಧಿಗೆ ನೀಡಿರುತ್ತೇನೆ. ತನ್ನ ಒಪ್ಪಂದದ ಪ್ರಕಾರ ಸತೀಶ್ ಕುಲಾಲ್ ಇವರಿಗೆ ವಾಹನವನ್ನು ಯಾವುದೇ ಅಕ್ರಮ ಸೊತ್ತುಗಳ ಸಾಗಾಣಿಕೆ ಉಪಯೋಗಿಸಕೂಡದೆಂದು ತಿಳಿಸಿರುತ್ತೇನೆ. ಆದರೆ ಸತೀಶ್ ಇವರು ಒಪ್ಪಂದದ ಪ್ರಕಾರ ಬಾಕಿಯಿರುವ ರೂ.60,000/– ವನ್ನು ಒಪ್ಪಂದದ ಅವಧಿಯೊಳಗೆ ಅಥವಾ ಅದರ ನಂತರ ನೀಡಿರುವುದಿಲ್ಲ. ಸತೀಶ್ ಕುಲಾಲ್ ಇವರ ಒಪ್ಪಂದದ ಕರಾರು ಪತ್ರ ಮೂಲ ಪ್ರತಿಯನ್ನು ಹಾಜರುಪಡಿಸಿರುತ್ತೇನೆ. ಇದನ್ನು ನಿಶಾನೆ ಡಿ–1 ಎಂದು ಗುರುತಿಸಲಾಗಿದೆ. ಅದರಲ್ಲಿ ತನ್ನ ಸಹಿಯನ್ನು ನಿಶಾನೆ ಡಿ–1ಎ ಎಂದು ಮತ್ತು ಸತೀಶ್ ಇವರ ಸಹಿಯನ್ನು ನಿಶಾನೆ ಡಿ–1ಬಿ ಎಂದು ಗುರುತಿಸಲಾಯಿತು. ಸದರಿ ಮೊಕದ್ದಮೆಗೂ ತನಗೂ ಯಾವುದೇ ಸಂಬಂಧವಿಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ. ಎ.ಡಿ.ಪಿ. ಯವರ ಪಾಟೀ ಸವಾಲಿಗೆ ಉತ್ತರಿಸುತ್ತ, ತಾವು ಮೋಟಾರು ವಾಹನ

ಕಾಯಿದೆ ಪ್ರಕಾರ ಫಾರಂ–29 ಮತ್ತು 36ರಲ್ಲಿ ಮಾಲೀಕತ್ವದ ವರ್ಗಾವಣೆಗಾಗಿ ತುಂಬಿ ಕೊಟ್ಟಿರುವುದಿಲ್ಲ. ತಾನು ಸತೀಶ್ ಕುಲಾಲ್‌ಗೆ ತನ್ನ ಕಾರನ್ನು ವಹಿಸಿಕೊಟ್ಟ ನಂತರ ಸದರಿ ಕಾರು ಯಾವುದೇ ಅಪರಾಧ ಪ್ರಕರಣಗಳಲ್ಲಿ ಒಳಗೊಂಡಲ್ಲಿ ಅದಕ್ಕೆ ತಾನು ಜವಾಬ್ದಾರನಲ್ಲ. ತಾನು ಸತೀಶ್ ಕುಲಾಲ್ ಇವರನ್ನು ವಿಚಾರಿಸಲು ಅವರ ಮನೆಗೆ ಹೋಗಿದ್ದು, ಅವರು ಸಿಕ್ಕಿರುವುದಿಲ್ಲ. ತನ್ನ ವೈಯಕ್ತಿಕ ಜೀವನಕ್ಕಾಗಿ ಕಾರನ್ನು ಇರಿಸಿಕೊಂಡು ಸಂಸಾರ ನಡೆಸುತ್ತಿರುತ್ತೇನೆ. ಎಂದರೆ ಸರಿ, ತಾನು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆಂದರೆ ಸರಿಯಲ್ಲ ಎಂದು ಸಾಕ್ಷಿ ನುಡಿದಿರುತ್ತಾರೆ.

ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಹಾಗೂ ತನಿಖಾಧಿಕಾರಿಯವರ ಹೇಳಿಕೆ ಹಾಗೂ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ, ಫಿರ್ಯಾದುದಾರರು ಪ್ರಕರಣಕ್ಕೆ ಸಂಬಂಧಿಸಿ ವಾಹನವನ್ನು ತಪಾಸಣೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕಾಗಿದ್ದು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶಯಿಲ್ಲದ ಪ್ರಯುಕ್ತ ಸರ್ಚ್ ಮೆಮೊವನ್ನು ತಯಾರಿಸಿರುವುದಿಲ್ಲ ಹಾಗೂ ಮಾನ್ಯ ಸತ್ರ ನ್ಯಾಯಾಲಯ, ದ.ಕ.ಜಿಲ್ಲೆ, ಮಂಗಳೂರು ಇವರ ಕ್ರಿಮಿನಲ್ 63/2003 ದಿನಾಂಕ:19.01.2004 ಮತ್ತು ಮಾನ್ಯ ಉಚ್ಚ ನ್ಯಾಯಾಲಯ, ಕರ್ನಾಟಕ, ಬೆಂಗಳೂರು ಇವರ ಕ್ರಿಮಿನಲ್ ರಿವಿಷನ್ ಪಿಟಿಷನ್ ಸಂಖ್ಯೆ: 808/2004 ದಿನಾಂಕ:01.08.2007ರ ಆದೇಶದಲ್ಲಿ ಅಬಕಾರಿ ಕಾಯಿದೆಯನ್ವಯ ವಾಹನವನ್ನು ಶೋಧನೆ ಮಾಡುವ ಮೊದಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರಂಟ್ ಪಡೆಯಬೇಕು ಅಥವಾ ಸರ್ಚ್ ವಾರಂಟ್ ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಸರ್ಚ್ ಮೆಮೊವನ್ನು ತಯಾರಿಸಿ ಮಹಜರಿನಲ್ಲಿ ನಮೂದಿಸಿರಬೇಕು ಎಂಬ ಕಾರಣಕ್ಕೆ ಅಂದಿನ ಪ್ರಾಧಿಕಾರವು ನೀಡಿದ ಆದೇಶವನ್ನು ತಳ್ಳಿ ಹಾಕಿ ವಾಹನವನ್ನು ಅರ್ಜಿದಾರರ ವಶಕ್ಕೆ ಬಿಡುಗಡೆಗೊಳಿಸಬೇಕೆಂದು ತೀರ್ಪು ನೀಡಿರುತ್ತಾರೆ. ಈ ಪ್ರಕರಣದಲ್ಲಿ ಫಿರ್ಯಾದುದಾರರು ದಿನಾಂಕ:31.03.2004 ರಂದು ರಾತ್ರಿ 10–00 ಗಂಟೆಗೆ ವಾಹನ ಸಂಖ್ಯೆ: ಕೆಎ–19–ಎನ್–5966 ನ್ನು ಶೋಧಿಸಿದ ಸಂದರ್ಭದಲ್ಲಿ ಶೋಧನಾ ವಾರಂಟ್ ಪಡೆಯದಿದ್ದು, ರೆಕಾರ್ಡ್ಸ್ ಆಫ್ ರೀಜನ್ಸ್ ಮೆಮೊವನ್ನು ಸಹಾ ನ್ಯಾಯಾಲಯಕ್ಕೆ ಒಪ್ಪಿಸದಿರುವ ಕಾರಣ ಮೇಲಿನ ಘನ ಉಚ್ಚ ನ್ಯಾಯಾಲಯದ ತೀರ್ಪನ್ನು ಗಣನೆಗೆ ತೆಗೆದುಕೊಳ್ಳಬೇಕಾಗಿರುತ್ತದೆ. ಅಭಿಯೋಜಕ ಸಾಕ್ಷಿ ವಿಚಾರಣೆಯ ಬಗ್ಗೆ ಫಿರ್ಯಾದುದಾರರಿಗೆ ಹಲವಾರು ಬಾರಿ ಹಾಜರಾತಿ ನೋಟೀಸುಗಳನ್ನು ನೀಡಿದರೂ ಈ ಪ್ರಾಧಿಕಾರದ ಮುಂದೆ ಸಾಕ್ಷಿ ನುಡಿಯಲು ವಿಫಲರಾಗಿರುತ್ತಾರೆ. ಪ್ರಕರಣ ದಾಖಲಿಸಿರುವ ಮುಖ್ಯ ಸಾಕ್ಷಿ ಮತ್ತು ಮಹಜರು ಸಾಕ್ಷಿದಾರರು ನ್ಯಾಯಾಲಯದ ಮುಂದೆ ಹಾಜರಾಗಿ ಅಪರಾಧವನ್ನು ಸಾಬೀತುಪಡಿಸುವ ಬಗ್ಗೆ ಅಭಿಯೋಜಕ ಸಾಕ್ಷಿ ನೀಡಲು ವಿಫಲರಾಗಿರುವುದರಿಂದ, ಪ್ರಕರಣಕ್ಕೆ ಸಂಬಂಧಿಸಿದಂತೆ ದಾಖಲಿಸಿದ ಅಪರಾಧಕ್ಕೆ ಸಂಬಂಧಿಸಿ ಸಾಕ್ಷ್ಯಾಧಾರಗಳು ಇಲ್ಲದಿರುವುದರಿಂದ ಪ್ರಾಸಿಕ್ಯೂಶನ್ ಆರೋಪವನ್ನು ಸಾಬೀತುಪಡಿಸಲು ವಿಫಲರಾಗಿರುತ್ತಾರೆ.

ರಕ್ಷಣಾ ಸಾಕ್ಷಿ ವಿಚಾರಣೆ ಅಂಶಗಳನ್ನು ಹಾಗೂ ಘನ ಉಚ್ಚ ನ್ಯಾಯಾಲಯದ ಸಿಆರ್‌ಪಿ–808/2004ರ ದಿನಾಂಕ:01.08.2007ರ ತೀರ್ಪು ಆದೇಶವನ್ನು ಗಣನೆಗೆ ತೆಗೆದುಕೊಂಡಾಗ ಮೂರನೇ ವಿವಾದಾಂಶಕ್ಕೆ ನಕರಾತ್ಮಕವಾಗಿ ಉತ್ತರಿಸಲಾಗಿದೆ. ಆದುದರಿಂದ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಎಸ್‌ಡಿಕೆ/229/ಡಿಟಿಸಿಆರ್/2003–04, ದಿನಾಂಕ:20ನೇ ಮಾರ್ಚ್, 2009**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಮಂಗಳೂರು ಉತ್ತರ ಪೊಲೀಸ್ ಠಾಣೆ ಇವರ ತಕ್ಷೀರು ಸಂಖ್ಯೆ: 102/2004 ದಿನಾಂಕ:01.04.2004ರಲ್ಲಿ ಜಪ್ತುಪಡಿಸಿರುವ ಮಾರುತಿ 800 ಕಾರು ಸಂಖ್ಯೆ: ಕೆಎ–19–ಎನ್–5966 ನ್ನು ಈ ಪ್ರಾಧಿಕಾರದ ಆದೇಶದ ಸಂಖ್ಯೆ: ಎಸ್‌ಡಿಕೆ/229/ಡಿಟಿಸಿಆರ್/2003–04 ದಿನಾಂಕ:11.02.2005ರಲ್ಲಿ ವಾಹನದ ಆರ್.ಸಿ. ಮಾಲೀಕರಾದ ಶ್ರೀ ರಾಜ್ ಕುಮಾರ್, ಬಿನ್ ವೀರಪ್ಪ, ಹೊಟೇಲ್ ನಾರಾಯಣ, ದೇವಾಡಿಗ ಕಾಂಪೌಂಡ್, ದೇರೆಬೈಲ್, ಕೊಂಚಾಡಿ, ಅಶೋಕನಗರ, ಮಂಗಳೂರು ಇವರ ಸುಪರ್ದಿಗೆ ತಾತ್ಕಾಲಿಕ ನೆಲೆಯಲ್ಲಿ ಬಿಡುಗಡೆಗೊಳಿಸಿದ ಆದೇಶವನ್ನು ಖಾಯಂಗೊಳಿಸಿ ಆದೇಶಿಸಿದೆ ಹಾಗೂ ಸದ್ರಿ ವಾಹನ ಮಾಲೀಕರು ತಾತ್ಕಾಲಿಕ ಬಿಡುಗಡೆಗಾಗಿ ಒಪ್ಪಿಸಿರುವ ಭದ್ರತೆಯ ಬ್ಯಾಂಕ್ ಭದ್ರತೆ, ಬಾಂಡ್ ಪತ್ರವನ್ನು ಹಿಂದಕ್ಕೆ ನೀಡಲು ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ:20.03.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹಮ್ಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–1**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ**

ಪ್ರಾ.ಸಾ.–1: ಶ್ರೀಮತಿ ಪ್ರೇಮ ಜಿ. ಉಡ್ಪಿಕಾರ್, ಅಬಕಾರಿ ನಿರೀಕ್ಷಕರು (ನಿವೃತ್ತ), ಹಂಪನಕಟ್ಟ ವಲಯ.

ಪ್ರಾ.ಸಾ.–2: ಶ್ರೀ ಜ್ಞಾನದೇವ್, ಅಬಕಾರಿ ರಕ್ಷಕ, ಕೊಡಿಯಾಲ್‌ಬೈಲ್ ಉಪವಲಯ.

**ಅನುಬಂಧ–2**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲಾತಿಗಳು**

ನಿಶಾನೆ ಪಿ–1: ಕೆಮಿಕಲ್ ವರದಿ.

**ಅನುಬಂಧ–3**

**ವಾಹನ ಮಾಲೀಕರ ಪರ ವಿಚಾರಣೆ ಮಾಡಿದ ಸಾಕ್ಷಿದಾರರು:**

ಪಿಡಬ್ಲ್ಯೂ–1: ಶ್ರೀ ರಾಜ್‌ಕುಮಾರ್ (ವಾಹನ ಮಾಲೀಕರು)

**ಅನುಬಂಧ–4**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ಸಾಕ್ಷಿದಾರರು**

ಡಿ–1: ಕರಾರು ಪತ್ರ

ಡಿ–1ಎ: ಶ್ರೀ ರಾಜ್ ಕುಮಾರ್ ರವರ ಸಹಿ.

ಡಿ–1ಬಿ: ಶ್ರೀ ಸತೀಶ್ ಕುಲಾಲ್‌ರವರ ಸಹಿ.

**ನೂರ್ ಮಹಮ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ
ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್,
ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.365

**ಸಹಾಯಕ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ, ವಿದ್ಯುತ್ ಉಪವಿಭಾಗ, ಶಿವಮೊಗ್ಗ**

**ನಮೂನೆ**

| | | |
|---|---|---|
| 1. | ಸಚಿವಾಲಯ | ಕರ್ನಾಟಕ ಸರ್ಕಾರ |
| 2. | ಇಲಾಖೆ | ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ. |
| 3. | ಸಬ್‌ಯೂನಿಟ್ | ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ ಶಿವಮೊಗ್ಗ. |
| 4. | ಸಾರ್ವಜನಿಕ ಪ್ರಾಧಿಕಾರ | ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ (ದ), ಕೆ.ಆರ್.ವೃತ್ತ, ಬೆಂಗಳೂರು– 5600001. |

| **ಮೇಲ್ಮನವಿ ಪ್ರಾಧಿಕಾರ (ಹೆಸರು/ವಿಳಾಸ/ಫೋನ್ ಇತ್ಯಾದಿ)** | **ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ)** | **ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಹೆಸರು/ವಿಳಾಸ/ಫೋನ್ ಇತ್ಯಾದಿ)** |
|---|---|---|
| ಶ್ರೀ ಹೆಚ್.ಎ. ಕಾಂತರಾಜಪ್ಪ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿದ್ಯುತ್ ವಿಭಾಗ, ಕೆ.ಆರ್. ಸರ್ಕಲ್, ಬೆಂಗಳೂರು–5600001. | ಶ್ರೀ ಜಿ.ಹೆಚ್. ಶಶಿಧರ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ–577201. | ಶ್ರೀ ಎ.ಜಿ. ಹಾಲೇಶಪ್ಪ ಕಿರಿಯ ಇಂಜಿನಿಯರ್, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ–577201. |
| ಫ್ಯಾಕ್ಸ್ – 080–22212613, 080–22112809 | ಫ್ಯಾಕ್ಸ್: – | ಫ್ಯಾಕ್ಸ್: – |
| ಕಛೇರಿ ಫೋನ್–080–22212613, 080–22112809 | ಕಛೇರಿ ಫೋನ್–08182–222545 | ಕಛೇರಿ ಫೋನ್– 08182– 222545 |
| ಇ–ಮೇಲ್ : pwd_ele_div@yahoo.com | ಇ–ಮೇಲ್: – | ಇ–ಮೇಲ್: – |

ಸಹಾಯಕ ಕಾರ್ಯಪಾಲಕ ಅಭಿಯಂತರು,
ಲೋಕೋಪಯೋಗಿ
ವಿದ್ಯುತ್ ಉಪವಿಭಾಗ, ಶಿವಮೊಗ್ಗ.

**FORMAT**

1. Secretariat — Govt. of Karnataka
2. Department — Public Works Department
3. Sub Unit — The Assistant Executive Engineer, PWD Electrical Sub Division, Shimoga.
4. Public Authority — The Chief Engineer, PWD Communication and Building (South), K.R.Circle, Bangalore-5600001.

| Applellate Authority (Name / Address / Phone etc…) | Public Information Officer (Name / Address / Phone etc…) | Assistant Public Information Officer (Name / Address / Phone etc…) |
|---|---|---|
| Sri. H.A. Kantharajappa,<br>Electrical Division , K.R.Circle,<br>Bangalore- 5600001. | Sri. G.H. Shashidhar,<br>Assistant Executive Engineer,<br>PWD Electrical Sub Division<br>Shimoga - 577201. | Sri. A.G.Haleshappa<br>Junior Engineer,<br>PWD Electrical Sub Division<br>Shimoga - 577201. |
| Fax - 080 - 22212613 | Fax - | Fax - |
| Phone (Office)<br>080 - 22212613<br>080 - 22112809 | Phone (Office)<br>08182 - 222545 | Phone (Office)<br>08182 - 222545 |
| E-Mail:<br>pwd_ele_div@yahoo.com | E-Mail: ---- | E-Mail: ----- |

Assistant Executive Engineer,
PWD Electrical Sub Division, Shimoga.

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ.**

**ನಂ: ಸ.ಕಾ.ಇ/ಲೋ.ವಿ.ಉ.ವಿ/ಶಿ/ಸಿಬ್ಬಂದಿ–1/ಮಾ.ಹ.ಕೈ/2005/09–10, ದಿನಾಂಕ:**

**ಸುತ್ತೋಲೆ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋ.ಇ:64:ಸ್ವೀಮರ:05 ದಿನಾಂಕ:23.09.2005 ಹಾಗೂ ಲೋಇ:16–ಐಟಿಸಿ:08:2750 ದಿನಾಂಕ:25.02.2008 ಮತ್ತು ಮುಖ್ಯ ಇಂಜಿನಿಯರು (ಸಂಕದ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ: ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ:05:ಇಎಸ್ಎಫ್:05–06 ದಿನಾಂಕ:19.09.2005 ಹಾಗೂ ಮುಖ್ಯ ಇಂಜಿನಿಯರ್ ಸಂಕದ ಬೆಂಗಳೂರು ಸಿಬಿಎಸ್:ಮಹಾಕ:208:07–08 ದಿನಾಂಕ:20.03.2008 ಪರಿಷ್ಕೃತ ನಿರ್ದೇಶನದಂತೆ 2005ರ ಮಾಹಿತಿ ಹಕ್ಕು ಅಧಿನಿಯಮ–2 ರ ಅಡಿಯಲ್ಲಿ ಲೋ.ಇ. ಮುಖ್ಯಸ್ಥರನ್ನು ಸಾರ್ವಜನಿಕ ಪ್ರಾಧಿಕಾರಿ ಎಂದು ನಾಮಾಂಕಿತ ಮಾಡಿ ಸರ್ಕಾರವು ನೇಮಿಸಿದೆ.

ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(2) ಅಡಿಯಲ್ಲಿ ಇಲಾಖಾ ಮುಖ್ಯಸ್ಥರು ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿ ಕಾರ್ಯ ವಿಧಾನದ ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ಇಲಾಖಾ ಮುಖ್ಯಸ್ಥರು ಎಲ್ಲಾ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ಮತ್ತು ಸದರಿ ನಿಯಮ 5(1) ರ ಅಡಿಯಲ್ಲಿ ಕಾರ್ಯಪಾಲಕ ಇಂಜಿನಿಯರುಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಿರುತ್ತಾರೆ.

ಈ ಸಂಬಂಧ ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿದ್ಯುತ್ ಉಪ ವಿಭಾಗ ವ್ಯಾಪ್ತಿಗೆ ಸಂಬಂಧಿಸಿದಂತೆ ವಿದ್ಯುತ್ ಉಪ ವಿಭಾಗ ಕಛೇರಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರನ್ನು "ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರ" (ಎಸ್.ಪಿ.ಐ.ಓ) ಎಂದು ಕಛೇರಿಯ ಕಿರಿಯ ಇಂಜಿನಿಯರ್ ಇವರನ್ನು "ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ) ಎಂದು ಈ ಮೂಲಕ ನಾಮಾಂಕಿತ ಮಾಡಲಾಗಿದೆ. ಈ ಬಗ್ಗೆ ಈ ಕಛೇರಿಯಿಂದ "ಮಾಹಿತಿ ಹಕ್ಕು

ಕೈಪಿಡಿ–2005"ನ್ನು ಪ್ರಕಟಿಸಲಾಗಿದ್ದು, ವೆಬ್‌ಸೈಟ್‌ನಲ್ಲಿ ಪ್ರಚುರಪಡಿಸುವಂತೆ ಡಿ.ಪಿ.ಸಿ/ಎನ್.ಪ.ಸಿ. ಇವರಿಗೆ ಸೂಚಿಸಲಾಗಿದೆ. ಶಿವಮೊಗ್ಗ ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ ಕಛೇರಿಯಿಂದ ಮಾಹಿತಿಯನ್ನು ಈ ಮೂಲಕ ಪುರಷ್ಕರಿಸಿ ಪ್ರಕಟಿಸಿದೆ.

ಸಹಾಯಕ ಕಾರ್ಯಪಾಲಕ ಅಭಿಯಂತರು,
ಲೋಕೋಪಯೋಗಿ
ವಿದ್ಯುತ್ ಉಪವಿಭಾಗ, ಶಿವಮೊಗ್ಗ.

**ನಮೂನೆ**

**ಮಾಹಿತಿ ಹಕ್ಕು ಅಧಿನಿಯಮ–2005**

**ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ.**

ಮಾಹಿತಿ ಹಕ್ಕು ಅಧಿನಿಯಮ – 2005 ಸೆಕ್ಷನ್ 5(1) (2) ರ ಅಡಿಯಲ್ಲಿ ಈ ಕಛೇರಿಯಿಂದ ನೇಮಿಸಲಾದ ಅಧಿಕಾರಿಗಳು ಸಾರ್ವಜನಿಕ ಸಂಪರ್ಕ ಅಧಿಕಾರಿಗಳಾಗಿರುತ್ತಾರೆ.

ಈ ಕಛೇರಿಯಲ್ಲಿ ಮಾಹಿತಿ ದಾಖಲೆಗಳನ್ನು ನೀಡುವ ಅಧಿಕಾರಿಗಳು: ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) ರ ಪ್ರಕಾರ.

| ಮಾಹಿತಿ ಅಧಿಕಾರಿ ಹೆಸರು | ಪದನಾಮ |
|---|---|
| ಶ್ರೀ ಜಿ.ಹೆಚ್.ಶಶಿಧರ್ | ಸಹಾಯಕ ಕಾರ್ಯಪಾಲಕ ಅಭಿಯಂತರು, ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ. ದೂರವಾಣಿ ಸಂಖ್ಯೆ: 08182–222545 |

ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(2) ರ ಪ್ರಕಾರ

| ಸಹಾಯಕ ಮಾಹಿತಿ ಅಧಿಕಾರಿ ಹೆಸರು | ಪದನಾಮ |
|---|---|
| ಶ್ರೀ ಎ.ಜಿ.ಹಾಲೇಶಪ್ಪ | ಕಿರಿಯ ಅಭಿಯಂತರು ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ. ದೂರವಾಣಿ ಸಂಖ್ಯೆ: 08182–222535 |

ಮೇಲಿನ ಅಧಿಕಾರಿಗಳು ಮಾಹಿತಿಯನ್ನು 30 ದಿನಗಳೊಳಗಾಗಿ ನೀಡದಿದ್ದಲ್ಲಿ ಅಥವಾ ಸಹಕರಿಸದಿದ್ದಲ್ಲಿ ದೂರನ್ನು ಮತ್ತು ಮೇಲ್ಮನವಿಯನ್ನು ಸೆಕ್ಷನ್ 19(1)ರ ಪ್ರಕಾರ ಕೆಳಕಂಡ ಅಧಿಕಾರಿಯವರಿಗೆ ನೀಡಬಹುದು.

ಕಾರ್ಯಪಾಲಕ ಅಭಿಯಂತರು(ವಿ),
ಲೋಕೋಪಯೋಗಿ ವಿದ್ಯುತ್ ವಿಭಾಗ,
ಕೆ.ಆರ್.ಸರ್ಕಲ್, ಬೆಂಗಳೂರು.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ–2005 ಸೆಕ್ಷನ್ 5(1) ರ ಪ್ರಕಾರ ಜಿ.ಹೆಚ್.ಶಶಿಧರ್ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಆದ ನಾನು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ:02.03.2009 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಿ:
ಪದನಾಮ: ಸಹಾಯಕ ಕಾರ್ಯಪಾಲಕ ಅಭಿಯಂತರು,
ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ.

**ಕರ್ತವ್ಯದ ಹಾಜರಾತಿ**

ಮಾಹಿತಿ ಪಡೆಯುವ ಹಕ್ಕು ಅಧಿನಿಯಮ–2005 ಸೆಕ್ಷನ್ 5(1) ರ ಪ್ರಕಾರ ಎ.ಜಿ. ಹಾಲೇಶಪ್ಪ, ಕಿರಿಯ ಇಂಜಿನಿಯರ್ ಆದ ನಾನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎ.ಪಿ.ಐ.ಓ.) ಯಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ:13.11.2008 ರಂದು ಹೊಣೆಗಾರಿಕೆಯನ್ನು ಒಪ್ಪಿಕೊಂಡಿರುತ್ತೇನೆ.

ಸಹಿ:
ಪದನಾಮ: ಕಿರಿಯ ಇಂಜಿನಿಯರ್
ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ,
ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ.

**ಸುವರ್ಣ ಕರ್ನಾಟಕ–2005**

ಕರ್ನಾಟಕ ಸರ್ಕಾರ

(ಲೋಕೋಪಯೋಗಿ ಇಲಾಖೆ)

ಮಾಹಿತಿ ಹಕ್ಕು ಕೈಪಿಡಿ 2005

ಸೆಕ್ಷನ್ 4 (1) (ಬಿ) ಅನ್ವಯ

ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ,
ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ
ಶಿವಮೊಗ್ಗ.

**ಸುವರ್ಣ ಕರ್ನಾಟಕ–2005**

ಕರ್ನಾಟಕ ಸರ್ಕಾರ

ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,

ವಿದ್ಯುತ್ ಉಪ ವಿಭಾಗ, ಶಿವಮೊಗ್ಗ

ಮಾಹಿತಿ ಹಕ್ಕು ಕೈಪಿಡಿ – 2005 ಸೆಕ್ಷನ್ 4 (1) (ಬಿ) ಅನ್ವಯ

**1**. ಕಛೇರಿಯ ಬಗ್ಗೆ ವಿವರಗಳು, ಕಾರ್ಯಗಳು ಮತ್ತು ಕರ್ತವ್ಯಗಳು.

ಅ) ಕಛೇರಿಯ ಹೆಸರು : ಸಹಾಯಕ ಕಾರ್ಯಪಾಲಕ ಅಭಿಯಂತರವರ ಕಛೇರಿ, ಲೋಕೋಪಯೋಗಿ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ.

ಆ) ರಚನೆ:

| ಸಹಾಯಕ ಕಾರ್ಯಪಾಲಕ ಇಂಜಿನಿಯರ್–1 | |
|---|---|
| ತಾಂತ್ರಿಕ ಶಾಖೆ<br>ಸಹಾಯಕ ಇಂಜಿನಿಯರ್ – 1 ಖಾಲಿ<br>ಕಿರಿಯ ಇಂಜಿನಿಯರ್ : ಒಟ್ಟು–6–<br>4 ಖಾಲಿ | ಆಡಳಿತ ಶಾಖೆ<br>ದ್ವಿತೀಯ ದರ್ಜೆ ಸಹಾಯಕರು–1<br>ಕಂಪ್ಯೂಟರ್ ಆಪರೇಟರ್–1 ಖಾಲಿ<br>"ಡಿ" ದರ್ಜೆ ನೌಕರರು–1 |
| | ವೈರ್‌ಮೆನ್‌ಗ್ರೇಡ್–III : ಒಟ್ಟು–03 – 01 –ಖಾಲಿ |

**ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು**

1) ಶ್ರೀ ಜಿ.ಹೆಚ್.ಶಶಿಧರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್(ಕೆ.ಪಿ.ಟಿ.ಸಿ.ಎಲ್ ನಿಂದ) (ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ)

2) ಶ್ರೀ ಎ.ಜಿ. ಹಾಲೇಶಪ್ಪ, ಕಿರಿಯ ಇಂಜಿನಿಯರ್ (ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ)

3) ಶ್ರೀ ಕೆ.ಮಂಜಪ್ಪ, ಕಿರಿಯ ಇಂಜಿನಿಯರ್ (ಕೆ.ಪಿ.ಟಿ.ಸಿ.ಎಲ್ ನಿಂದ) (ಲೋಕೋಪಯೋಗಿ ವಿದ್ಯುತ್ ಉಪವಿಭಾಗ, ಶಿವಮೊಗ್ಗ)

**ಕಾರ್ಯಗಳು ಮತ್ತು ಕರ್ತವ್ಯಗಳು:**

ಶಿವಮೊಗ್ಗ ವಿದ್ಯುತ್ ಉಪ ವಿಭಾಗದ ವ್ಯಾಪ್ತಿಯಲ್ಲಿ 3 ಜಿಲ್ಲೆಗಳು ಬರಲಿದ್ದು, ವಿವಿಧ ಲೆಕ್ಕ ಶೀರ್ಷಿಕೆ ಅಡಿಯಲ್ಲಿ ಬರುವ ಎಲ್ಲಾ ವಿದ್ಯುತ್ ಕಾಮಗಾರಿಗಳ ಪೂರ್ಣ ಕಾರ್ಯ ವ್ಯಾಪ್ತಿಯನ್ನು ಹೊಂದಿದ್ದು, ಹಾಗೂ ಸಾರ್ವಜನಿಕ ಆಸ್ತಿ – ಪಾಸ್ತಿಗಳಿಗೆ ಸಂಬಂಧಿಸಿದ ಆಡಳಿತಾತ್ಮಕ, ಆರ್ಥಿಕ ಹಾಗೂ ಸೇವೆಗಳಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸಲಾಗುತ್ತಿದೆ.

**2. ಅಧಿಕಾರಿಗಳು ಮತ್ತು ಸಿಬ್ಬಂದಿ : ಅಧಿಕಾರ ಹಾಗೂ ಕರ್ತವ್ಯಗಳು:**

1) **ಸಹಾಯಕ ಕಾರ್ಯಪಾಲಕ ಇಂಜಿನಿಯರ್:–1** ಲೋಕೋಪಯೋಗಿ ಇಲಾಖೆ ವಿದ್ಯುತ್ ಉಪ ವಿಭಾಗ, ಶಿವಮೊಗ್ಗ ಕಛೇರಿಯ ಅಧಿಕೃತ ಮುಖ್ಯಸ್ಥರಾಗಿದ್ದು, ಇಲಾಖಾ ಮುಖ್ಯಸ್ಥರ ಮೇಲಾಧಿಕಾರಿಗಳ ನಿರ್ದೇಶನಗಳನ್ನು ನಿಯಮದ ಚೌಕಟ್ಟಿನಲ್ಲಿ ಜಾರಿಗೊಳಿಸುವ ಅಧಿಕಾರ ಮತ್ತು ಜವಾಬ್ದಾರಿಗಳನ್ನು ಹೊಂದಿರುತ್ತಾರೆ. ಹಾಗೂ ನಿಯಂತ್ರಣದ ಅಧಿಕಾರವನ್ನು ಹೊಂದಿರುತ್ತಾರೆ.

2) **ಸಹಾಯಕ ಇಂಜಿನಿಯರ್:–** ಮಂಜೂರಾದ ಹುದ್ದೆ –1 ಖಾಲಿ

3) **ಕಿರಿಯ ಇಂಜಿನಿಯರ್:– ಮಂಜೂರಾದ ಹುದ್ದೆ–6, 4 ಖಾಲಿ:** ಉಪ ವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಗೆಯ ಕಾಮಗಾರಿಗಳ ನಕ್ಷೆ ಮತ್ತು ಅಂದಾಜು ಪಟ್ಟಿಗಳನ್ನು ತಯಾರಿಸುವುದು ಹಾಗೂ ಕಾಮಗಾರಿಗಳ ಪೂರ್ಣ ಉಸ್ತುವಾರಿ, ನಿರ್ವಹಣೆ ಮಾಡುವುದು, ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು ಮತ್ತು ಸಂಬಂಧಪಟ್ಟಂತೆ ಶಾಖೆಯ ಪೂರ್ಣ

ಪತ್ರ ವ್ಯವಹಾರ ಹಾಗೂ ಮಾಸಿಕ ಎಂ.ಎಂ.ಆರ್. ಮೀಟಿಂಗ್‌ಗೆ ವರದಿ ಸಲ್ಲಿಸುವುದು, ಉಪ ವಿಭಾಗ ವ್ಯಾಪ್ತಿಯಲ್ಲಿ ಎಲ್ಲಾ ಕಟ್ಟಡಗಳ ಅಂಕಿ ಅಂಶ ನಿರ್ವಹಣೆ ಮಾಡುವುದು, ವಾರ್ಷಿಕ ಆಡಳಿತಾತ್ಮಕ ಪ್ರಗತಿ ವರದಿ ತಯಾರಿಸಿ ಮೇಲಾಧಿಕಾರಿಗಳಿಗೆ, ಎಲ್‌ಎಕ್ಯೂ :ಎಲ್‌ಸಿಕ್ಯೂ ಪತ್ರ ವ್ಯವಹಾರ ನಡೆಸುವುದು.

**ಆಡಳಿತ ಶಾಖೆ**

1) ದ್ವಿತೀಯ ದರ್ಜೆ ಸಹಾಯಕ :– 1

ನೌಕರರ ಸೇವಾಪುಸ್ತಕದ ನಿರ್ವಹಣೆ, ಕಛೇರಿಯ ಆಯವ್ಯಯ, ಸಿಬ್ಬಂದಿ ವೆಚ್ಚದ ವಿವರ, ಸಿಬ್ಬಂದಿ ವೇತನ ಬಿಲ್, ಸಿಬ್ಬಂದಿ ಶಾಖೆಯಲ್ಲಿದ್ದು ಪತ್ರಗಳ ಸ್ವೀಕೃತಿ ಮತ್ತು ವಿಲೇವಾರಿ ಬಗ್ಗೆ ಕೆಲಸ ನಿರ್ವಹಿಸುವುದು, ವೇತನ, ಪ್ರಯಾಣ ಭತ್ಯೆ, ಸಾದಿಲ್ವಾರು ಬಿಲ್ಲು ತಯಾರಿಸುವುದು, ಮಾಸಿಕ, ಅರ್ಧವಾರ್ಷಿಕ, ತ್ರೈಮಾಸಿಕ ನಿಯತಕಾಲಿಕಗಳನ್ನು ತಯಾರಿಸುವುದು ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಸೂಚಿಸಿದ ಇತರೆ ಕೆಲಸಗಳು.

2) ಕಂಪ್ಯೂಟರ್ ಆಪರೇಟರ್ (ಬಾಹ್ಯಬಲ) :– 1 : – ಖಾಲಿ – ಕಛೇರಿಗೆ ಸಂಬಂಧ ಪಟ್ಟ ಪತ್ರಗಳ ಬೆರಳಚ್ಚು ಮಾಡುವುದು ಇತ್ಯಾದಿ.

3) "ಡಿ" ಗ್ರೂಪ್ ಜವಾನ :– 1 ಕಛೇರಿಯ ಎಲ್ಲಾ ಕೊಠಡಿಗಳನ್ನು ಶುಚಿಯಾಗಿಡುವುದು, ಕಡತಗಳ ವಿಲೇವಾರಿ ಬಗ್ಗೆ ಅಧಿಕಾರ, ಸಿಬ್ಬಂದಿಯವರಿಗೆ ಸಹಕರಿಸುವುದು, ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

4) ವೈರ್‌ಮೆನ್‌ಗ್ರೇಡ್–III: ಮಂಜೂರಾದ ಹುದ್ದೆ–03–01– ಖಾಲಿ– ಶಾಖಾಧಿಕಾರಿಗಳು, ಕಾರ್ಯಪಾಲಕ ಅಭಿಯಂತರರವರು ಸೂಚಿಸಿದ ವಿದ್ಯುತ್ ಕಾರ್ಯಗಳನ್ನು ನಿರ್ವಹಿಸುವುದು.

**3. ಮೇಲ್ವಿಚಾರಣೆ ಮತ್ತು ಜವಬ್ದಾರಿಗಳನ್ನು ಒಳಗೊಂಡಂತೆ ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸುವ ಕ್ರಮಗಳು:**

1) **ಸಹಾಯಕ ಕಾರ್ಯಪಾಲಕ ಇಂಜಿನಿಯರ್:–** ಸರ್ಕಾರದಿಂದ ಲಭ್ಯವಾದ ಅಧಿಕಾರ ಪ್ರತ್ಯಾ ಯೋಜನೆಯ ಅನುಸಾರ ತಾಂತ್ರಿಕ ಮತ್ತು ಆಡಳಿತಾತ್ಮಕ ವಿಷಯಗಳ ಬಗ್ಗೆ ನಿರ್ಣಯ ಕೈಗೊಳ್ಳುವುದು, ವಿದ್ಯುತ್ ಉಪ ವಿಭಾಗ ವ್ಯಾಪ್ತಿಯ ಕಾಮಗಾರಿಗಳ ಕಾರ್ಯನೀತಿಯ ಬಗ್ಗೆ ಪ್ರಸ್ತಾವನೆಗಳನ್ನು ಇಲಾಖಾ ಮುಖ್ಯಸ್ಥರಿಗೆ, ಮೇಲಾಧಿಕಾರಿಗಳಿಗೆ ಸಲ್ಲಿಸುವುದು ಹಾಗೂ ವಿದ್ಯುತ್ ಕಾಮಗಾರಿಗಳ (3 ಜಿಲ್ಲೆಯ) ಪರಿವೀಕ್ಷಣೆ ಮಾಡುವುದು.

2) **ಸಹಾಯಕ ಇಂಜಿನಿಯರ್/ಕಿರಿಯ ಇಂಜಿನಿಯರ್:–** ಉಪ ವಿಭಾಗ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಕಾಮಗಾರಿಗಳ ಅಂದಾಜು ಪಟ್ಟಿಗಳನ್ನು ನಕ್ಷೆಗಳನ್ನು ತಯಾರಿಸುವುದು ಕಾಮಗಾರಿಗಳ ಪೂರ್ಣ ಉಸ್ತುವಾರಿ ನೋಡಿಕೊಳ್ಳುವುದು ಹಾಗೂ ಕಾಮಗಾರಿಗಳ ಬಿಲ್ಲನ್ನು ತಯಾರಿಸುವುದು, ಕಡತ ಮಂಡಿಸುವುದು, ಅಧಿಕಾರ ಪ್ರತ್ಯಾ ಯೋಜನೆಯ ಬಗ್ಗೆ ಮಾಹಿತಿ ಒದಗಿಸುವುದು, ಕಾಮಗಾರಿಗಳ ಪತ್ರ ವ್ಯವಹಾರ ನಡೆಸುವುದು, ಉಪ ವಿಭಾಗದ ಕಾಮಗಾರಿಗಳ ಬಗ್ಗೆ ಪ್ರಗತಿ ವರದಿ ಸಿದ್ದಪಡಿಸುವುದು, ಕಾಮಗಾರಿ ಬಜೆಟ್ ನಿರ್ವಹಣೆ ಹಾಗೂ ಮೀಟಿಂಗ್ ವರದಿಗಳನ್ನು ತಯಾರಿಸುವುದು.

3) **ದ್ವಿತೀಯ ದರ್ಜೆ ಸಹಾಯಕರು :–** ಆಡಳಿತ ಶಾಖೆ ಪತ್ರ ವ್ಯವಹಾರಗಳು, ಪ್ರಸ್ತಾವನೆಗಳು, ಕಡತಗಳನ್ನು ನಿಯಮಾನುಸಾರ ಪರಿಶೀಲಿಸಿ ಅಭಿಪ್ರಾಯ ಶಿಫಾರಸ್ಸಿನೊಂದಿಗೆ ಆದೇಶಕ್ಕಾಗಿ ಮೇಲಾಧಿಕಾರಿಗಳಿಗೆ ಸಲ್ಲಿಸುವುದು.

4) **ಕಂಪ್ಯೂಟರ್ ಆಪರೇಟರ್:–** ಕಛೇರಿಗೆ ಸಂಬಂಧ ಪಟ್ಟ ಪತ್ರಗಳ ಬೆರಳಚ್ಚು ಮಾಡುವುದು.

5) **"ಡಿ" ದರ್ಜೆ ನೌಕರರು :–** ಕಛೇರಿಯ ಎಲ್ಲಾ ಕೊಠಡಿಗಳನ್ನು ಶುಚಿಯಾಗಿಡುವುದು, ಕಡತ, ಟಪಾಲು ಇತ್ಯಾದಿಗಳನ್ನು ಶಾಖೆಯೊಳಗೆ ಮತ್ತು ಹೊರಗೆ ಸಂಬಂಧಿಸಿದವರಿಗೆ ತಲುಪಿಸುವುದು.

6) **ವೈರ್‌ಮೆನ್‌ಗ್ರೇಡ್–III :–** ಶಾಖಾಧಿಕಾರಿಗಳು, ಕಾರ್ಯಪಾಲಕ ಅಭಿಯಂತರರವರು ಸೂಚಿಸಿದ ವಿದ್ಯುತ್ ಕಾರ್ಯಗಳನ್ನು ನಿರ್ವಹಿಸುವುದು.

**4. ಕಾರ್ಯನಿರ್ವಹಿಸುವಲ್ಲಿ ಅನುಸರಿಸುವ ಮಾನದಂಡಗಳು :–** ಕೆ.ಪಿ.ಡಬ್ಲ್ಯೂ, 'ಡಿ' ಕೋಡ್ ಮತ್ತು ಕೆ.ಪಿ.ಡಬ್ಲ್ಯೂ 'ಎ' ಕೋಡ್ ಹಾಗೂ ಕರ್ನಾಟಕ ಟ್ರಾನ್ಸ್‌ಫರೆನ್ಸಿ ಇನ್ ಪಬ್ಲಿಕ್ ಪ್ರಕ್ಯೂರ್‌ಮೆಂಟ್ ಆಕ್ಟ್ –2002 ರಲ್ಲಿ ನಿಗಧಿಪಡಿಸಿರುವ ಮಾನದಂಡಗಳನ್ನು ಅನುಸರಿಸುವುದು.

**5. ಕಾರ್ಯಗಳನ್ನು ನಿರ್ವಹಿಸುವಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು:– ನಿಬಂಧನೆಗಳು, ಸೂಚನೆಗಳು, ಕೈಪಿಡಿ ಮತ್ತು ದಾಖಲೆಗಳು.**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958

2) ಕರ್ನಾಟಕ ಆರ್ಥಿಕ ಸಂಹಿತೆ ನಿಯಮ

3) ಖಜಾನೆ ಸಂಹಿತೆ.

4) ಸಾದಿಲ್ವಾರು ವೆಚ್ಚದ ಕೈಪಿಡಿ

5) ಕೆ ಪಿ ಡಬ್ಲ್ಯೂ ಡಿ 'ಎ' ಕೋಡ್

6) ಕೆ ಪಿ ಡಬ್ಲ್ಯೂ ಡಿ 'ಡಿ' ಕೋಡ್

7) ಕರ್ನಾಟಕ ನಾಗರೀಕ ಸೇವೆಗಳು (ನಡತೆ) ನಿಯಮಗಳು 1966

8) ಕರ್ನಾಟಕ ನಾಗರೀಕ ಸೇವೆಗಳು (ಸಿ.ಸಿ.ಎ.) ನಿಯಮಗಳು 1956

9) ಕಾರ್ಯಾಲಯದ ಕೈಪಿಡಿ

10) ಉಗ್ರಾಣದ ಕೈಪಿಡಿ

11) ಆರ್ಥಿಕ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು (ಆದೇಶ ದಿನಾಂಕ:02.02.2001)

12) ಲೋಇ ಮತ್ತು ನೀರಾವರಿ ಇಲಾಖಾ ಅಧಿಕಾರ ಪ್ರತ್ಯಾಯೋಜನೆಯ ನಿಯಮಗಳು (ಆದೇಶ ದಿನಾಂಕ:15.12.1994)

13) ಸೇವಾ ವಿಷಯಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ:ಆರ್ಥಿಕ ಇಲಾಖೆ: ಲೋಇ ಹೊರಡಿಸಿದ ಆದೇಶದ ಸುತ್ತೋಲೆ, ಸೂಚನೆಗಳು.

14) ಇಲಾಖಾ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು.

**6. ಇಲಾಖೆಯು ಹೊಂದಿರುವ ದಸ್ತಾವೇಜುಗಳ ಪಟ್ಟಿ**

1) ವಿಷಯ ವಹಿ : ಸಿಬ್ಬಂದಿಯ ವಹಿ

2) ವಿಧಾನಸಭೆ : ವಿಧಾನಪರಿಷತ್ ಪ್ರಶ್ನೆಗಳಿಗೆ ಸಂಬಂಧಿಸಿದ ರಿಜಿಸ್ಟರ್

3) ನ್ಯಾಯಾಲಯದ : ಕೆಎಟಿ ಪ್ರಕರಣಗಳ ರಿಜಿಸ್ಟರ್

4) ಆಯವ್ಯಯ ಅಂದಾಜುಪಟ್ಟಿ ಅನುಮೋದನೆ ರಿಜಿಸ್ಟರ್

5) ನಗದು ಪುಸ್ತಕ ನಿರ್ವಹಣೆ

6) ಟಿ ಅಂಡ್ ಪಿ ರಿಜಿಸ್ಟರ್

7) ಇತರೆ ರಿಜಿಸ್ಟರ್‌ಗಳು

**7. ನೀತಿ–ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯ ವಿಧಾನದ ವಿವರಗಳು:**

ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯನ್ನಾಗಿ ವಿದ್ಯುತ್ ಉಪ ವಿಭಾಗ ಕಛೇರಿಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರನ್ನು ನೇಮಕ ಮಾಡಲಾಗಿದೆ, ಇವರು ಸಂಬಂಧಿಸಿದ ಸಾರ್ವಜನಿಕ ವಲಯಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸಿ ಅಂತಿಮ ಆದೇಶವನ್ನು ಹೊರಡಿಸಲು ಕ್ರಮ ಕೈಗೊಳ್ಳುವರು.

ಸರ್ಕಾರದ ಒಂದು ಭಾಗವಾಗಿ ಅಥವಾ ಸಲಹೆಗಳನ್ನು ಪಡೆಯಲು ರಚಿತವಾದ 2 ಮತ್ತು ಹೆಚ್ಚು ವ್ಯಾಪ್ತಿಗಳನ್ನೊಳಗೊಂಡ ಮಂಡಳಿ, ಪರಿಷತ್ತು, ಸಮಿತಿ ಮತ್ತು ಇತರೆ ಅಂಗಗಳು ಮತ್ತು ಅವುಗಳ ಸಭೆಗಳು ಸಾರ್ವಜನಿಕರ ಪ್ರವೇಶಕ್ಕೆ ಮುಕ್ತವಾಗಿದೆಯೇ ಅಥವಾ ಈ ಸಭೆಗಳ ನಡವಳಿಗಳು ಸಾರ್ವಜನಿಕರಿಗೆ ದೊರಕುತ್ತಿದೆಯೆ ಎಂಬ ಬಗ್ಗೆ ವಿವರಣೆ.

–ಯಾವುದು ಇರುವುದಿಲ್ಲ–

**8. ಲೋಕೋಪಯೋಗಿ ಇಲಾಖೆಯ ವಿದ್ಯುತ್ ಉಪ ವಿಭಾಗದ ಅಧಿಕಾರಿಗಳ ಮತ್ತು ಸಿಬ್ಬಂದಿ ವರ್ಗದವರ ವಿವರ ಹಾಗೂ ದೂರವಾಣಿ ಸಂಖ್ಯೆಗಳು.**

| ಕ್ರ. ಸಂ. | ಶ್ರೀಯುತರ ಹೆಸರು ಮತ್ತು ಹುದ್ದೆ | ಕಛೇರಿ ದೂರವಾಣಿ ಸಂಖ್ಯೆ | ಮೊಬೈಲ್ ಸಂಖ್ಯೆ |
|---|---|---|---|
| 1. | ಅಬ್ದುಲ್ ರೆಹಮಾನ್ –ಕಿರಿಯ ಇಂಜಿನಿಯರ್ | 222545 | 9663450997 |
| 2. | ಬಿ.ನಂಜಪ್ಪ – ದ್ವಿ.ದ.ಸಹಾಯಕರು | 222545 | 9900565844 |
| 3. | ಶ್ರೀಮತಿ ನಂಜಮ್ಮ(ಗಣನೆ)– ವೈರ್‌ಮೆನ್‌ಗ್ರೇಡ್–III | 222545 | |
| 4. | ಕರಿಹನುಮಯ್ಯ (ಗಣನೆ)– ವೈರ್‌ಮೆನ್‌ಗ್ರೇಡ್–III | 222545 | 9008991579 |
| 5. | ನಾಗರಾಜ ಮಹಾಬಲೇಶ್ವರ ಪಾಟೀಲ್– "ಡಿ" ಗ್ರೂಪ್ ನೌಕರರು | 222545 | |

**ನಿಯೋಜನೆ ಮೇಲಿನ ಅಧಿಕಾರಿಗಳು**

| | | | |
|---|---|---|---|
| 1. | ಜಿ.ಹೆಚ್. ಶಶಿಧರ್ – ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 222545 | 9448567374 |
| 2. | ಎ.ಜಿ. ಹಾಲೇಶಪ್ಪ – ಕಿರಿಯ ಇಂಜಿನಿಯರ್ | 222545 | 9480545372 |
| 3. | ಕೆ.ಮಂಜಪ್ಪ – ಕಿರಿಯ ಇಂಜಿನಿಯರ್ | 222545 | 9900899864 |

ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳು ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನಗಳ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ
ಪಿ.ಆರ್.889 ಸಂರಕ್ಷಣಾಧಿಕಾರಿ, ಶಿರಸಿ ವಿಭಾಗ, ಶಿರಸಿ.

**PROCEEDINGS OF THE ASSISTANT COMMISSIONER OF COMMERCIAL TAXES, LOCAL VAT OFFICE-270, MANGALORE, DATED:5H SEPTEMBER, 2009,**

**Present:** A.M. Somashekhariaha, ACCT (LVO-270), Mangalore.

**Subject:** Loss of One 'C" Form in case of M/s Durga Auto Distributors, Durga Buildings, Marnamikatta Circle, Mangalore.

**Read:** Letter Dated:01.07.2009 of M/s Sri Durga Auto Distributors, Durga Building, Marnamikatta Circle, Mangalore.

**Preamble:**

M/s Sri Durga Auto Distributors, Durga Building, Marnamikatta Circle, Mangalore is a registered dealer borne on the files of this office bearing TIN NO. 29370098506. The dealer in his letter cited at read above has intimated that one "C" Forms bearing Sl.No.KA-C/01 0399887 issued by this office are lost in transit on the way of Hampankatta, Mangalore.



M/s Sri Durga Auto Distributors, Durga Building, Marnamikatta Circle, Mangalore has produced the proof for having filed the complaint to Police Authorities and executed indemnity bond Dated:22.06.2009 in favour of the Government as laid down under Rule 12(2) and 12(9) of CST Act, 1956.

Since the One filled "C" Forms bearing Sl.No.KA-C/01 0399887 are to be Treated as lost in transit and are to be treated as invalid. Hence this order.

**Order No. ACCT/LVO-270/CR-2009-10, Dated:**

In view of the Circumstances explained above the filled one "C" Forms bearing Sl.No.KA-C/01 0399877 issued by this office on 19.09.2008 are treated as lost in transit between Mangalore City.

**A.M. SOMASHEKHARIAHA**
Asst. Commissioner of Commercial
Taxes, Local Vat Office-270, Mangalore.

**OFFICE OF THE ASSISTANT COMMISSIONER OF COMMERCIAL TAXES, LOCAL VAT OFFICE-270, MANGALORE**

**NOTIFICATION**

**Notified Authority Under Rule 6(i) of the CST (Karnataka) Rules 1957**

**No.ACCT/LVO-270/CR-/09-10, Dated:**

By virtue of the provision of Rule 12(2) of the CST (Registration & turnover) Rules 1957 and Rule 6(e) and 6(i) of CST (Karnataka) Rules 1957, it is hereby notified for general information that the declarations in Form-C described below is declared to be lost while in transit.

| Sl. No. | Number (Including code No.) of declaration Forms Lost/Destroyed or stolen | Name and address of the dealer to whom declaration Forms/is/are issued by the department, with date of "C" Form issuje | Registration Certificate No.of the dealer under CST Act 1956 | The Address of the dealer to whom the declaration is/are sent | Date of issue of Forms by the dealer | Whether Lost/ Stolen/ Destroyed | Remarks |
|---|---|---|---|---|---|---|---|
| 1. | "C" Forms No. KA-C/01 0399877 | M/s Sri Durga Auto Distributors, Durga Building, Marnamikatta Circle, Mangalore. | TIN: 29370098506 | FITZWELL AUTO CORPORATION B-6 Opp:Rajalaxmi Complex, Kaler, Bhiwandi Maharastra. | 22.09.2008 | Lost | Bill No.30/30-4-08 Rs. 20766/Bill No.40/8-5-2008 No.75/30-5-08 Rs.11775/ No.96/17-6-08 Rs.8348 and 118/28-06-08 Rs.7854/total amount of Rs.60394/-is issued in C Form bearing No.KA-C/01 0399877. Particulars of Invoices entered in the Lost C Form. |

**A.M. SOMASHEKHARIAHA**
Asst. Commissioner of Commercial
Taxes, Local Vat Office-270, Mangalore.

PR-890

**ಕರ್ನಾಟಕ ವಿಧಾನಸಭೆ**

**ವಿಧಾನಸಭೆಯ ಸಚಿವಾಲಯ, ಅಂಚೆ ಪೆಟ್ಟಿಗೆ ನಂ.5074, ವಿಧಾನಸೌಧ, ಬೆಂಗಳೂರು–560 0233**

**ಸಂಖ್ಯೆ: ವಿಸಸ/ಶಾರಶಾ/24/ಸಿಎ/2008–09, ದಿನಾಂಕ:3ನೇ ಸೆಪ್ಟೆಂಬರ್, 2009**

**ವಿಷಯ:** ವಿಧಾನಸಭಾ ಸದಸ್ಯರ ವಿಳಾಸದ ಬದಲಾವಣೆ.

ಮಾಗಡಿ ವಿಧಾನಸಭಾ ಕ್ಷೇತ್ರದ ಮಾನ್ಯ ಸದಸ್ಯರಾದ **ಶ್ರೀ ಹೆಚ್.ಸಿ. ಬಾಲಕೃಷ್ಣ** ಅವರು ಕೆಳಕಂಡಂತೆ ತಮ್ಮ ವಿಳಾಸವನ್ನು ಬದಲಾಯಿಸಿರುತ್ತಾರೆ.

ಶ್ರೀ ಹೆಚ್.ಸಿ. ಬಾಲಕೃಷ್ಣ,

ವಿಧಾನಸಭಾ ಸದಸ್ಯರು, "ಅಮ್ಮ", ನಂ.21(22), ಎಂ.ಐ.ಜಿ. 1ನೇ ಅಡ್ಡರಸ್ತೆ, 1ನೇ ಹಂತ, ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ, ಬೆಂಗಳೂರು–560 079.

ಆದಕಾರಣ, ಮಾನ್ಯ ಸದಸ್ಯರಿಗೆ ಇನ್ನು ಮುಂದೆ ಕಳುಹಿಸಲಾಗುವ ಎಲ್ಲಾ ಕಾಗದ ಪತ್ರಗಳನ್ನು ಮೇಲ್ಕಂಡ ವಿಳಾಸಕ್ಕೆ ಕಳುಹಿಸಿಕೊಡಬೇಕೆಂದು ಕೋರಲು ನಿರ್ದೇಶಿತನಾಗಿದ್ದೇನೆ.

**ಕೆ.ಸಿ. ಗೋಪಿಕೃಷ್ಣ**
ಅಧೀನ ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ.

ಪಿ.ಆರ್.893

**ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳ ಕಛೇರಿ, ಚಿತ್ರದುರ್ಗ**

**ಪ್ರಕಟಣೆ ಕೃಪೆಗಾಗಿ**

**ಸಂಖ್ಯೆ:ಬಿಸಿಎಂ:ಕಾತಭ:ಸಿಆರ್–152:2009–10, ದಿನಾಂಕ:1ನೇ ಸೆಪ್ಟೆಂಬರ್, 2009**

**ವಿಷಯ:** 2009–10ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿಯಲ್ಲಿ ತರಬೇತಿಗೆ ನಿಯೋಜಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68: ದಿನಾಂಕ:02.11.1990.

2) ಸರ್ಕಾರದ ಆದೇಶ ಸಂಖ್ಯೆ: ಸಕಇ 446 ಬಿಎಂಎಸ್ 2005 ದಿನಾಂಕ:01.12.2005.

ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ಪ್ರವರ್ಗ–1, 2(ಎ), 3(ಎ), (ಬಿ) ರಡಿ ಬರುವ ಹತ್ತು ನಿರುದ್ಯೋಗಿ ಕಾನೂನು ಪದವೀಧರರನ್ನು ಹಾಗೂ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಪಾರ್ಸಿ, ಬೌದ್ಧ ಇತ್ಯಾದಿ ವರ್ಗದ ಎರಡು ನಿರುದ್ಯೋಗಿ ಕಾನೂನು ಪದವೀಧರರನ್ನು ನ್ಯಾಯಾಂಗ ತರಬೇತಿ ಯೋಜನೆಯಡಿ 2009–10ನೇ ಸಾಲಿನಲ್ಲಿ ಆಯ್ಕೆ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದೆ. ಆಸಕ್ತರು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಏರೋಪ್ಲೇನ್ ಬಿಲ್ಡಿಂಗ್ ಚಿತ್ರದುರ್ಗ ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಹೆಚ್ಚಿನ ಮಾಹಿತಿ ಹಾಗೂ ನಿಗದಿತ ಅರ್ಜಿ ನಮೂನೆಗಳನ್ನು ಪಡೆಯಬಹುದಾಗಿದೆ. ಅರ್ಜಿ ಸಲ್ಲಿಸಲು ದಿನಾಂಕ:19.09.2009 ಕಡೆಯ ದಿನಾಂಕವಾಗಿರುತ್ತದೆ.

**ಅರ್ಜಿ ಸಲ್ಲಿಸಲು ಇರುವ ನಿಬಂಧನೆಗಳು:**

1) ಅಭ್ಯರ್ಥಿಯು ಹಿಂದುಳಿದ ವರ್ಗಗಳಿಗೆ ಸೇರಿದ ಪ್ರವರ್ಗ–1, 2(ಎ), 3(ಎ), 3(ಬಿ) ಗೆ ಸೇರಿರಬೇಕು ಹಾಗೂ ಮತೀಯ ಅಲ್ಪಸಂಖ್ಯಾತರ ಸಮುದಾಯಕ್ಕೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಇತ್ಯಾದಿ ವರ್ಗದ ಅಭ್ಯರ್ಥಿಗಳಾಗಿರಬೇಕು.

2) ಆಯ್ಕೆ ಮಾಡಲಾಗುವ ಒಟ್ಟಾರೆ ಹಿಂದುಳಿದ ವರ್ಗಗಳ 10 ಅಭ್ಯರ್ಥಿಗಳಲ್ಲಿ ಶೇಕಡಾ 33.33 ರಷ್ಟು ಮಹಿಳಾ ಅಭ್ಯರ್ಥಿಗಳಿಗೆ ಮೀಸಲಿಡಲಾಗುವುದು.

3) ಅಭ್ಯರ್ಥಿಯು ಎಲ್.ಎಲ್.ಬಿ. ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ ಮೊದಲು ಎರಡು ವರ್ಷದ ಅವಧಿಯೊಳಗೆ ಪಾಸು ಮಾಡಿರಬೇಕು.

4) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಪಿಡಿ 97 ದಿನಾಂಕ:08.02.2000 ರಂತೆ ನಿಗದಿತ ನಮೂನೆಯಲ್ಲಿ ಜಾತಿ ಮತ್ತು ಆದಾಯ ಪ್ರಮಾಣ ಪತ್ರ ಪಡೆದು ಸಲ್ಲಿಸಬೇಕು ಮತ್ತು ಪ್ರವರ್ಗ 2(ಎ), 3(ಎ), ಹಾಗೂ 3(ಬಿ) ಅಭ್ಯರ್ಥಿಗಳು ಹಾಗೂ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಇತ್ಯಾದಿ ವರ್ಗಗಳ ಅಭ್ಯರ್ಥಿಗಳಿಗೆ ಆದಾಯ ಮಿತಿ ರೂ.15,000–00ಗಳು ಆಗಿರುತ್ತದೆ. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ.

5) ತರಬೇತಿ ಅವಧಿಯು ನಾಲ್ಕು ವರ್ಷಗಳಾಗಿದ್ದು ತರಬೇತಿಯ ಅವಧಿಯಲ್ಲಿ ಮಾಸಿಕ 1000–00 ರೂ.ಗಳ ತರಬೇತಿ ಭತ್ಯೆ ಪಾವತಿಸಲಾಗುವುದು. ಆಯ್ಕೆಯನ್ನು ಜಿಲ್ಲಾ ಆಯ್ಕೆ ಸಮಿತಿಯ ಮೂಲಕ ನಡೆಸಲಾಗುವುದು.

6) ಅಭ್ಯರ್ಥಿಯು ಕನಿಷ್ಠ ವಯೋಮಿತಿಯು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 30 ವರ್ಷಗಳು ಮೀರಿರಬಾರದು. ಪ್ರವರ್ಗ–1ರ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 31 ವರ್ಷಗಳು ಮೀರಿರಬಾರದು.

7) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರು ನೋಂದಾಯಿಸಿರಬೇಕು. ನೋಂದಾಯಿಸಿಲ್ಲದ ಪಕ್ಷದಲ್ಲಿ ಆಯ್ಕೆಯಾದ ತಕ್ಷಣ ನೋಂದಾಯಿಸಿದ ಹೊರತು ಶಿಷ್ಯವೇತನ ಪಾವತಿಸಲಾಗುವುದಿಲ್ಲ.

8) ಆಯ್ಕೆಯಾದ ಅಭ್ಯರ್ಥಿಗಳು ಸುಳ್ಳು ಜಾತಿ/ ಆದಾಯ ಪ್ರಮಾಣ ಪತ್ರ ಅಥವಾ ಇತರೆ ಯಾವುದೇ ತಪ್ಪು ಮಾಹಿತಿಯನ್ನು ನೀಡಿ ಆಯ್ಕೆಯಾದ ಪಕ್ಷದಲ್ಲಿ ಅಂತಹವರನ್ನು ಶಿಕ್ಷೆಗೆ ಗುರಿಪಡಿಸುವುದಲ್ಲದೆ ಶಿಷ್ಯವೇತನದ ಜೊತೆಗೆ ಶೇಕಡಾ 10ರ ಬಡ್ಡಿಯನ್ನು ಭೂ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು. ಅಲ್ಲದೇ ತರಬೇತಿಯನ್ನು ಮಧ್ಯದಲ್ಲಿ ಬಿಟ್ಟಲ್ಲಿ ಅವರು ಇಲಾಖೆಯಿಂದ ಪಡೆದ ಪೂರ್ಣ ಶಿಷ್ಯವೇತನವನ್ನು ಹಿಂದಿರುಗಿಸಬೇಕಾಗುವುದು.

9) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್/ ಸರ್ಕಾರಿ ವಕೀಲರು 20 ವರ್ಷಗಳಿಂದ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸುತ್ತಿರುವ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

10) ಅಪೂರ್ಣ/ ಅವಧಿ ಮೀರಿದ ತಪ್ಪು ಮಾಹಿತಿ ಅಥವಾ ನಿಗದಿತ ದಿನಾಂಕದ ನಂತರ ಸ್ವೀಕರಿಸಲಾದ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೆ ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ
ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ
ಅಲ್ಪಸಂಖ್ಯಾತರ ಇಲಾಖೆ, ಚಿತ್ರದುರ್ಗ.

ಪಿ.ಆರ್.892

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು(ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಗುಲಬರ್ಗಾ**

**ಪ್ರಕಟಣೆ**

**ಸಂಖ್ಯೆ:ಎಲ್‌ಸಿ610/ಕಾನಿಅ(ವಿ)/ಬೃಕಾವಿ/ಗು/ಸಕಾನಿಅ(ವಿ)/2008–09/1532–1533, ದಿನಾಂಕ:29ನೇ ಆಗಸ್ಟ್, 2009**

ಕ.ವಿ.ಪ್ರ.ನಿ.ನಿ.ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣದ 67(2)(ಸಿ)ರ ಅನ್ವಯ ಈ ಮೂಲಕ ಯೋಜನೆಗಳನ್ನು ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

**1) ಯೋಜನೆಯ ಹೆಸರು:** ಗುಲಬರ್ಗಾ ಜಿಲ್ಲೆ, ಶಹಾಪೂರ ತಾಲ್ಲೂಕಿನ ವಡಗೇರಾ ಗ್ರಾಮದ ಹಾಲಿ ಇರುವ 33/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು 110/33/11 ಕೆ.ವಿ. ಉಪಕೇಂದ್ರಕ್ಕೆ ಉನ್ನತಿಕರಣಗೊಳಿಸುವುದು ಮತ್ತು 110 ಕೆ.ವಿ. ಖಾನಾಪುರ ವಿದ್ಯುತ್ ಉಪಕೇಂದ್ರದಿಂದ ಪ್ರಸ್ತಾವಿತ 110 ಕೆ.ವಿ ವಡಗೇರಾ ವಿದ್ಯುತ್ ಉಪಕೇಂದ್ರಕ್ಕೆ 20.40 ಕಿ.ಮೀ.ಗಳ ದೂರ 110 ಕೆ.ವಿ. ಸಿಂಗಲ್ ಸರ್ಕ್ಯೂಟ್ ಮಾರ್ಗವನ್ನು ಡಬಲ್ ಸರ್ಕ್ಯೂಟ್ ಗೋಪುರಗಳ ಮೇಲೆ ವಿದ್ಯುತ್ ಮಾರ್ಗವನ್ನು ನಿರ್ಮಾಣ ಮಾಡುವುದು.

**2) ಯೋಜನೆಯ ಪ್ರಯೋಜನಗಳು:** ವಡಗೇರಾ ಅಕ್ಕ–ಪಕ್ಕದ ಗ್ರಾಮಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) 110 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:** ಖಾನಾಪುರ, ಕುರಕುಂದಿ ಹಾಗೂ ವಡಗೇರಾ.

**4) ಅಂದಾಜು ವೆಚ್ಚ:** ರೂ.1360.78 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III)ರ (ಕೇಂದ್ರೀಯ ಕಾಯಿದೆ 1885ರ 13) ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಸದರಿ ಯೋಜನೆಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಅಭಿಯಂತರರು (ವಿ)
ಬೃ.ಕಾ.ವಿಭಾಗ, ಕ.ವಿ. ಪ್ರ.ನಿ.ನಿ. ಗುಲಬರ್ಗಾ.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು(ವಿ), ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಗುಲಬರ್ಗಾ**

**ಪ್ರಕಟಣೆ**

**ಸಂಖ್ಯೆ:ಎಲ್‌ಸಿ610/ಕಾನಿಅ(ವಿ)/ಬೃಕಾವಿ/ಗು/ಸಕಾನಿಅ(ವಿ)/2008–09/1532–1533, ದಿನಾಂಕ:29ನೇ ಆಗಸ್ಟ್, 2009**

ಕ.ವಿ.ಪ್ರ.ನಿ.ನಿ.ಯು 2003ರ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮ ಪ್ರಕರಣದ 67ರ ಅನ್ವಯ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರಿ ನಿಯಮದ ಪ್ರಕರಣದ 67(2)(ಸಿ)ರ ಅನ್ವಯ ಈ ಮೂಲಕ ಯೋಜನೆಗಳನ್ನು ತಿಳುವಳಿಕೆಗಾಗಿ ಪ್ರಕಟಿಸುತ್ತಿದೆ. ಯೋಜನೆಯ ವಿವರಗಳು ಈ ರೀತಿ ಇವೆ.

**1) ಯೋಜನೆಯ ಹೆಸರು:** ಗುಲಬರ್ಗಾ ಜಿಲ್ಲೆ, ಯಾದಗೀರ ತಾಲ್ಲೂಕಿನ ಗುರಮಠಕಲ್ ಗ್ರಾಮದ ಹಾಲಿ ಇರುವ 33/11 ಕೆ.ವಿ. ವಿದ್ಯುತ್ ಉಪಕೇಂದ್ರವನ್ನು 110/11 ಕೆ.ವಿ. ಉಪಕೇಂದ್ರಕ್ಕೆ ಉನ್ನತಿಕರಣಗೊಳಿಸುವುದು ಮತ್ತು 220 ಕೆ.ವಿ. ಸೇಡಂ ವಿದ್ಯುತ್ ಉಪಕೇಂದ್ರದಿಂದ ಪ್ರಸ್ತಾವಿತ 110 ಕೆ.ವಿ ಗುರಮಠಕಲ್ ವಿದ್ಯುತ್ ಉಪಕೇಂದ್ರಕ್ಕೆ 37.189 ಕಿ.ಮೀ.ಗಳ ದೂರ 110 ಕೆ.ವಿ. ಸಿಂಗಲ್ ಸರ್ಕ್ಯೂಟ್ ಮಾರ್ಗವನ್ನು ಡಬಲ್ ಸರ್ಕ್ಯೂಟ್ ಗೋಪುರಗಳ ಮೇಲೆ ವಿದ್ಯುತ್ ಮಾರ್ಗವನ್ನು ನಿರ್ಮಾಣ ಮಾಡುವುದು.

**2) ಯೋಜನೆಯ ಪ್ರಯೋಜನಗಳು:** ಗುರಮಠಕಲ್ ಅಕ್ಕ–ಪಕ್ಕದ ಗ್ರಾಮಗಳಿಗೆ ಒಳ್ಳೆಯ ಗುಣಮಟ್ಟದ ವಿದ್ಯುತ್ ಸರಬರಾಜು ಮಾಡುವುದು.

**3) 110 ಕೆ.ವಿ. ಮಾರ್ಗ ಹಾದುಹೋಗುವ ಹಳ್ಳಿಗಳು ಮತ್ತು ಪ್ರದೇಶಗಳು:** ಸೇಡಂ, ಮಾದವಾರ, ಇಮದಾಪುರ, ನಂಜೋಳ್ಳಿ, ಕೋಲಕುಂದಾ, ಬೀಮಸಾಗರ, ಮಲಕಪಲ್ಲಿ, ಮಿತಟಿಪಡಂಪಲ್ಲಿ, ತಿಪಡಂಪಲ್ಲಿ, ಕಾಕಲವಾರ ಹಾಗೂ ಗುರಮಠಕಲ್.

**4) ಅಂದಾಜು ವೆಚ್ಚ:** ರೂ.1400.15 ಲಕ್ಷಗಳು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮೇಲೆ ತಿಳಿಸಿರುವ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಅಧಿನಿಯಮ ಭಾಗ (III)ರ (ಕೇಂದ್ರೀಯ ಕಾಯಿದೆ 1885ರ 13) ಅನ್ವಯ ಟೆಲಿಗ್ರಾಫ್

ಪ್ರಾಧಿಕಾರವು ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಸದರಿ ಯೋಜನೆಯ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ನಿಗಮದ ಗಮನಕ್ಕೆ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 15 ದಿನಗಳ ಒಳಗೆ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸಬಹುದು.

ಕಾರ್ಯನಿರ್ವಾಹಕ ಅಭಿಯಂತರರು (ವಿ)
ಪಿ.ಡಿ.58 ಬ್ಯ.ಕಾ.ವಿಭಾಗ, ಕ.ವಿ. ಪ್ರ.ನಿ.ನಿ. ಗುಲಬರ್ಗಾ.

**AMANATH CO-OPERATIVE BANK LTD., BRIGADE ROAD BRANCH, BANGALORE**

**FORM NO.7**

**RULE 38(2) (C)**

**DISPUTE NO. JRD/UBF/1545/ 2004-05**

**C.E.P. NO.: AR/RO/(441) CEP/ 6/ 09-10**

**ATTACHMENT NOTICE OF IMMOVABLE PROPERTY**

To M/s Hira Education Trust, Represented by its Trustees (1) Mr. Mohammed Odebulla Shariff, (2) Mrs. Jameela Shariff, (3) Mr. Mohammed Hidayathulla Shariff, (4) Mr. Mohammed Abrarulla Shariff, No.1 and 1/1 3rd Cross, 'E' Street, Bhartinagar BMP Division No.77, Bangalore-560051 has been issued a written Attachment Notice No. ACB (JRD/UBF/1545/2004-2005 Amanath Co-operative Bank Ltd., Brigade Road, Branch, Bangalore to Pay Rs.72,23,059-70 + forther interest and other charges from 01.03.2007 which has not been paid by you and have failed to give reasons for non-payment of dues. So this Notice is to inform you that the following immovable properties has been attached and if the amount is not paid before 25.09.2009 with interest and other charges the Immovable property will be brought for auction/ sale as per law.

The Property Belongs to Mrs. Jameela Shariff

**SCHEDULE**

As per the sale deed Dated:18.05.1990, there are two portions which are adjacent to one and another with the following schedule and measurements.

**(a) For No.3 (old No.1/1)**
East – 'E' street, 3rd cross
West- Private Property
North-Corporation lane
South- Property No.1/36
Measuring 15ft by 20ft (Area 330 sqft)

**(b) For No.1 (old No.36)**
East-Property of Basha Sahib
West-Property of Corporation Land,
North-3rd Cross 'E' Street
South-Private Property
Measuring East-28.3 ft
West-7ft 7in +21ft 10in
North-21ft
South-11ft + 13ft 6"
Area- 770.54 sqft.

Sale Officer,
Amanath Co-operative Bank Ltd.,
Brigade Road Branch, Bangalore.

PD-59

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಳ್ಳಾರಿ**

**ಪ್ರಕರಣ ಸಂಖ್ಯೆ: ಕಾನಪ:ಉವಿ–2:191:09, ದಿನಾಂಕ:13ನೇ ಆಗಸ್ಟ್, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶೇಖ್ ಎಂ.ಡಿ. ಇದ್ರಿಶ್, ತಂ: ಶೇಖ್ ಜಲಾಲುದ್ದೀನ್, ವಯಸ್ಸು:58 ವರ್ಷ, ವೃತ್ತಿ: ಏನೂ ಇಲ್ಲ. | **ವಿರುದ್ಧ** | 1) ಮೆ: ಗ್ಯಾನನ್ ಡಂಕರ್ಲಿ ಮತ್ತು ಕಂ.ಲಿ., ತೋರಣಗಲ್ಲು, ಜಿಂದಾಲ್ ವರ್ಕ್ಸ್ ಜೆ.ಎಸ್.ಡಬ್ಲ್ಯೂ ಸ್ಟೀಲ್ ಲಿ., (ಮೆಕಾನಿಕಲ್ ವರ್ಕ್ಸ್), ವಿದ್ಯಾನಗರ ಪೋಸ್ಟ್, ತೋರಣಗಲ್ಲು, ಬಳ್ಳಾರಿ ಜಿಲ್ಲೆ.<br>2) ಮೆ: ಜೆ.ಎಸ್.ಡಬ್ಲ್ಯೂ ಸ್ಟೀಲ್ ಲಿ., ತೋರಣಗಲ್ಲು. |

2) ಶ್ರೀಮತಿ ರಾಯ್‌ಸನ್‌ಬೀಬಿ, ಗಂಡ: ಎಂ.ಡಿ. ಶೇಖ್ ಇದ್ರಿಶ್, ವಯಸು:53 ವರ್ಷ, ವೃತ್ತಿ:ಏನೂ ಇಲ್ಲ.
(ಅರ್ಜಿದಾರ 1 ಮತ್ತು 2ರವರು ಮೃತನ ತಂದೆ–ತಾಯಿಗಳು)
ವಾಸ: ನಯಾಬಜಾರ್ ಗ್ರಾಮ, ಪಲಮು ಜಿಲ್ಲೆ, ಜಾರ್‌ಖಂಡ್ ರಾಜ್ಯ.

**ಪ್ರಕಟಣೆ**

1 ಮತ್ತು 2ನೇ ಅರ್ಜಿದಾರರಾದ ಶೇಕ್ ಎಂ.ಡಿ. ಇದ್ರಿಶ್ ಮತ್ತು ಶ್ರೀಮತಿ ರಾಯಸನ್‌ಬೀಬಿ ಇವರುಗಳು ತಾವು ಮೃತ ಮವುಜ್ ಅಲಂನ ತಂದೆ–ತಾಯಿಗಳು, ಶಾಸನಬದ್ಧ ವಾರಸುದಾರರು ಹಾಗೂ ಅವಲಂಬಿತರೆಂದು ತಿಳಿಸುತ್ತಾ ತಮ್ಮ ಮಗನು 1ನೇ ಪ್ರತಿವಾದಿಗಳ ಸಂಸ್ಥೆಯಲ್ಲಿ ವೆಲ್ಡರ್ ಆಗಿ ಕೆಲಸ ಮಾಡುತ್ತಿದ್ದನೆಂದು ದಿನಾಂಕ:17.04.2009 ರಂದು ಹೆಚ್.ಎಸ್.ಎಂ. ಸೈಟ್‌ನಲ್ಲಿ ಮಾಡುತ್ತಿದ್ದಾಗ ಅಪಘಾತವಾಗಿ ಗಾಯಗೊಂಡು ದಿನಾಂಕ:18.04.2009 ರಂದು ಮೃತಪಟ್ಟಿರುತ್ತಾನೆಂದು ತಿಳಿಸುತ್ತಾ, ಮೃತನು ಅಪಘಾತಪೂರ್ವದಲ್ಲಿ ಆರೋಗ್ಯವಾಗಿದ್ದು ದಿನಕ್ಕೆ 150–00 ರೂ. ದಿನಗೂಲಿ ಪಡೆಯುತ್ತಿದ್ದನೆಂದು, ಇದರಿಂದ ತನ್ನ ಹಾಗೂ ತಮ್ಮ ಕುಟುಂಬ ಜೀವನ ನಡೆಸುತ್ತಿದ್ದನೆಂದು ಈಗ ಈತನ ಮರಣದಿಂದ ತಮ್ಮ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು ತಿಳಿಸಿ ನಷ್ಟ ಪರಿಹಾರ ಕೋರಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥಹವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಗೂ ಕರ್ನಾಟಕ ರಾಜ್ಯಪತ್ರ ಸರ್ಕಾರಿ ಹೊರಮುದ್ರಣಾಲಯ, ಬೆಂಗಳೂರು ಇಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಈ ನ್ಯಾಯಾಲಯಕ್ಕೆ ಆಕ್ಷೇಪಣೆಗಳನ್ನು ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪವಿಭಾಗ–2, ಬಳ್ಳಾರಿ.

ಪಿ.ಆರ್.894

**ಕಾರ್ಮಿಕ ಅಧಿಕಾರಿ ವ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–2, ಬಳ್ಳಾರಿ**
**ಪ್ರಕರಣ ಸಂಖ್ಯೆ: ಕಾನಪ:198:09:ಎಫ್, ದಿನಾಂಕ:10ನೇ ಸೆಪ್ಟೆಂಬರ್, 2009**

**ಅರ್ಜಿದಾರರು:**

1) ಶ್ರೀಮತಿ ಅಡಿವಮ್ಮ ಗಂ: ಲೇಟ್ ಗಾದಿಲಿಂಗಪ್ಪ, ವಯಸ್ಸು:30 ವರ್ಷ, ವೃತ್ತಿ: ಗೃಹಿಣಿ, ವಾಸ: ಬಳ್ಳಾರಿ.
2) ಮಾ: ರವಿಚಂದ್ರ ತಂ: ಲೇಟ್ ಗಾದಿಲಿಂಗಪ್ಪ, ವಯಸ್ಸು:11 ವರ್ಷ.
3) ಕು: ಸುಮಂಗಲಮ್ಮ ತಂ: ಲೇಟ್ ಗಾದಿಲಿಂಗಪ್ಪ, ವಯಸ್ಸು:09 ವರ್ಷ.
4) ಕು: ಶ್ರೀದೇವಿ ತಂ: ಲೇಟ್ ಗಾದಿಲಿಂಗಪ್ಪ, ವಯಸ್ಸು: 4 ವರ್ಷ.
5) ಶ್ರೀಮತಿ ರುದ್ರಮ್ಮ ಗಂ: ಲೇಟ್ ಮುದಿಮಲ್ಲಪ್ಪ, ವಯಸ್ಸು:50 ವರ್ಷ, ವೃತ್ತಿ: ಏನೂ ಇಲ್ಲ. ಎಲ್ಲರ ವಾಸ: ಶ್ರೀರಾಂಪುರ ಕಾಲೋನಿ, ಬಳ್ಳಾರಿ.

**ವಿರುದ್ಧ**

**ಪ್ರತಿವಾದಿಗಳು:**

1) ಟಿ. ರಾಮಾಂಜನೇಯಲು, ತಂ: ಟಿ. ನರಸಿಂಹಲು, ಲಾರಿ ಮಾಲೀಕರು, ನಂ.ಸಿಜಿ–04: ಜಿ–3899, ಡೋರ್ ನಂ. 3224, ಕೊಟ್ಟಾಲಪಲ್ಲಿ ಗ್ರಾಮ, ವಿಡಪದಕಲ್ಲು ಮಂಡಲ, ಅನಂತಪುರ ಜಿಲ್ಲೆ (ಎ.ಪಿ.)
2) ಡಿವಿಜನಲ್ ಮ್ಯಾನೇಜರ್, ಮೆ: ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಬಳ್ಳಾರಿ.

**ಪ್ರಕಟಣೆ**

ಶ್ರೀಮತಿ ಅಡಿವಮ್ಮ ಗಂ: ಲೇಟ್ ಗಾದಿಲಿಂಗಪ್ಪ (2) ರವಿಚಂದ್ರ, (3) ಕು: ಸುಮಂಗಲಮ್ಮ, (4) ಕು: ಶ್ರೀದೇವಿ (5) ಶ್ರೀಮತಿ ರುದ್ರಮ್ಮ, ಇವರುಗಳು ಲೇಟ್ ಗಾದಿಲಿಂಗಪ್ಪನ ಹೆಂಡತಿ, ಮಕ್ಕಳು ಹಾಗೂ ತಾಯಿಯಾಗಬೇಕೆಂದು, ಶಾಸನಬದ್ಧವಾರಸುದಾರರೆಂದು ತಿಳಿಸುತ್ತಾ, ದಿನಾಂಕ:29.03.2009 ರಂದು ಮೃತ ಗಾದಿಲಿಂಗಪ್ಪನು 1ನೇ ಪ್ರತಿವಾದಿಗಳ ಲಾರಿಯಲ್ಲಿ ಕೆಲಸದ ಮೇಲಿದ್ದಾಗ ಅಪಘಾತ ಸಂಭವಿಸಿ ಸ್ಥಳದಲ್ಲಿ ಮೃತಪಟ್ಟಿರುತ್ತಾನೆಂದು, ಅಪಘಾತ ಪೂರ್ವದಲ್ಲಿ ಮೃತನು

ಚೆನ್ನಾಗಿದ್ದು ದಿನಕ್ಕೆ 150–00 ರೂ. ದಿನಗೂಲಿಯಂತೆ ವೇತನ ಪಡೆದು ತನ್ನ ಹಾಗೂ ನಮ್ಮಗಳ ಕುಟುಂಬ ಜೀವನ ಸಾಗಿಸುತ್ತಿದ್ದನೆಂದು, ಈಗ ಆತನಿಲ್ಲದೆ ತಮ್ಮಗಳ ಜೀವನ ಸಾಗುವುದು ತುಂಬಾ ಕಷ್ಟಕರವಾಗಿರುತ್ತದೆಂದು, ಮೃತನ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಒಂದು ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಬೇರೆ ಯಾರಾದರೂ ವಾರಸುದಾರರು ಹಾಗೂ ಅವಲಂಬಿತರೆಂದು ಪರಿಗಣಿಸಬೇಕೆಂದು ಕೋರಿದಲ್ಲಿ ಅಂಥವರು ಈ ಪ್ರಕಟಣೆಯು ಈ ನ್ಯಾಯಾಲಯದ ನಾಮಫಲಕದಲ್ಲಿ ಹಾಗೂ ಕರ್ನಾಟಕ ರಾಜ್ಯ ಸರ್ಕಾರಿ ಹೊರವಲಯ ಮುದ್ರಣಾಲಯದಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಅರ್ಜಿ ಸಲ್ಲಿಸತಕ್ಕದ್ದು, ಅವಧಿಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ
ಪಿ.ಆರ್.895 ಆಯುಕ್ತರು, ಉಪವಿಭಾಗ–2, ಬಳ್ಳಾರಿ.

**GOVERNMENT OF KARNATAKA**

**DEPARTMENT OF COMMERCIAL TAXES**

**Office of the Commissioner of Commercial Taxes, VTK Building, Ist Main Road, Gandhinagar, Bangalore**

**NOTIFICATION**

**No.KSA/CR-86/09-10, Bangalore, Dated:27th August, 2009**

In exercise of powers conferred by sub-section (1) of section 18-A of the Karnataka Value-Added Tax Act, 2003, it is specified with immediate effect that a dealer registered under the said Act purchasing glass bottles for use by him in the bottling of liquor including wine and beer, from another dealer registered under the said Act, shall deduct tax at source as specified under the said section.

**PRADEEP SINGH KHAROLA**
PR-896 Commissioner of Commercial Taxes in Karnataka, Bangalore.

**GOVERNMENT OF KARNATAKA**

**DEPARTMENT OF COMMERCIAL TAXES**

**Office of the Commissioner of Commercial Taxes in Karnataka, Gandhinagar, Bangalore-560009**

**NOTIFICATION**

**No.KSA.CR-248/08-09, Bangalore, Dated:28th August, 2009**

In exercise of powers under sub-rule (aaaaa) of Rule 6 of the Central Sales Tax (Karnataka) Rules, 1957, considering it necessary to provide an option of self-printing of declarations in Form C to the dealers covered by the notification No.KSA.CR-248/08-09, Dated: 21st March, 2009 issued under the said sub-rule, in partial modification of the said notification, it is hereby notified that with effect from 10th day of September, 2009, every dealer specified under the said notification shall be issued the declaration in Form C Sought in the following manner:

(i) Every such dealer shall log on to the website http://vat.kar.nic.in/.

(ii) Using the user name and password communicated to him by this office, every such dealer shall proceed to file his request for issue of declarations in Form C in such website. He shall also indicate in the website his option whether he would like to print the form himself or would like the Local VAT Officer (LVO) or VAT Sub Officer (VSO) to print it.

(iii) The declarations in Form C sought by the dealer would be approved electronically by the concerned LVO or VSO within three working days from the date of his successful request.

(iv) After such approval, the dealer can print the declaration in Form C in triplicate on A4 size paper of not less than 75 gsm. Each declaration form so printed will have a unique number assigned on it. After printing, the dealer can have the seal of the Department of Commercial Taxes affixed by producing it before the LVO or VSO concerned.

(v) In cases where the dealer has opted for printing of the form by the LVO or VSO, the C Form declarations sought by the dealer would be printed by the LVO or VSO concerned. Subject to payment of the prescribed fee, such forms would be dispatched to the dealer within three working days from the day of his successful request. Any dealer wishing to collect the C Form declarations personally should indicate his preference for such mode of delivery at the time of filling in his request for their issue in the website. Such dealer can collect the declarations from the jurisdictional LVO or VSO on the fourth working day.

**PRADEEP SINGH KHAROLA**
Commissioner of Commercial Taxes in
Karnataka, Bangalore.

PR-897

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಕಾರ್ಮಿಕ ಭವನ, ಐಟಿಐ ಆವರಣ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29**

**ಸಂಖ್ಯೆ: ಡಬ್ಲ್ಯೂಸಿಎ/ಎಫ್‌ಸಿ/ಸಿಆರ್–09/09, ದಿನಾಂಕ:5ನೇ ಸೆಪ್ಟೆಂಬರ್, 2009**

**ಅರ್ಜಿದಾರರು:**

1) ಶ್ರೀಮತಿ ಬಿ. ಸೌಭಾಗ್ಯ, W/o ಲೇಟ್: ಬಿ. ವಿಜಯಕುಮಾರ್, 30 ವರ್ಷ.
2) ಕು: ಎ.ವಿ. ಕುಸುಮ D/o ಲೇಟ್ ಎ.ಬಿ. ವಿಜಯಕುಮಾರ್, 11 ವರ್ಷ.
3) ಮಾಸ್ಟರ್ ಎ.ವಿ. ಲೋಕ್‌ನರೇಶ್, S/o ಲೇಟ್:ಎ.ಬಿ. ವಿಜಯಕುಮಾರ್, 6 ವರ್ಷ.
4) ಬಸವರಾಜಪ್ಪ S/o ಲೇಟ್ ನೀಲಕಂಠೇಗೌಡ ಎ.ಎಸ್. ವರ್ಷ 70.
5) ಶ್ರೀಮತಿ ಗೌರಮ್ಮ W/o ಬಸವರಾಜಪ್ಪ 65– ವರ್ಷ, ಅತ್ತೂರು ವಿಲೇಜ್, ಹೊಸಕೋಟೆ (ತಾ), ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು:**

1) ವೆಂಕಟೇಶ್ S/o ಲಾ. ಮುನಿಶಾಮಪ್ಪ, ಮೇಜರ್ ಚಿಕ್ಕನಲ್ಲೂರಹಳ್ಳಿ ವಿಲೇಜ್, ಬೇಗೂರು (ಪೋ), ಹೊಸಕೋಟೆ (ತಾ), ಬೆಂಗಳೂರು ಗ್ರಾಮಾಂತರ ಜಿಲ್ಲೆ.
2) ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಡಿವಿಜನಲ್ ಆಫೀಸ್ ನಂ.2, ಖೆಸಿ ಬಿಲ್ಡಿಂಗ್ ನಂ.3, 1ನೇ ಮಹಡಿ, 1ನೇ ಕ್ರಾಸ್, ಗಾಂಧಿನಗರ, ಬೆಂಗಳೂರು–09.

**ಪ್ರಕಟಣೆ**

ಈ ಮೇಲೆ ನಮೂದಿಸಿರುವ ಅರ್ಜಿದಾರರು ತಾವು ಮೃತ ಶ್ರೀ ಎ.ಬಿ. ವಿಜಯಕುಮಾರ್ ಇವರ ಅವಲಂಬಿತರೆಂದು, ಮೃತನು 1ನೇ ಪ್ರತಿವಾದಿ ಬಳಿ ಚಾಲಕ ಕೆಲಸ ಮಾಡುವಾಗ, ಕೆಲಸದ ವೇಳೆಯಲ್ಲಿ ಹಾಗೂ ಕೆಲಸದ ಕಾರಣದಿಂದ ಉಂಟಾದ ಅಪಘಾತದಲ್ಲಿ ದಿನಾಂಕ:01.06.2008 ಮರಣ ಹೊಂದಿರುತ್ತಾರೆ ಎಂದು, ಈ ಸಂಬಂಧ ತಮಗೆ ಕಾಯ್ದೆಯ ಅನುಸಾರ ಪ್ರತಿವಾದಿಗಳಿಂದ ಬರತಕ್ಕ ಪರಿಹಾರವನ್ನು ಕೊಡಿಸಬೇಕೆಂದು ಈ ನ್ಯಾಯಾಲಯದ ಮುಂದೆ ಬೇಡಿಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ ಕಾರಣ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೇ ಹಾಗೂ ಮೇಲೆ ನಮೂದಿಸಿರುವ ಅರ್ಜಿದಾರರಲ್ಲದೇ, ತಾವೂ ಸಹಾ ಮೃತನ ನಿಜವಾದ "ಅವಲಂಬಿತರು" ಎಂದು ಪರಿಗಣಿಸಲು ಕೇಳಿಕೊಳ್ಳುವುದಾದರೇ, ಅಂತಹವರು ಈ ಪ್ರಕಟಣೆಯು ಈ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 (ಮೂವತ್ತು) ದಿವಸದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಬೇಡಿಕೆ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ
ಕಾರ್ಮಿಕ ಅಧಿಕಾರಿ, ಉಪವಿಭಾಗ–1, ಬೆಂಗಳೂರು.

ಪಿ.ಆರ್.877

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ನಂ. 82/2008–09 ದಿನಾಂಕ:26ನೇ ಜೂನ್, 2009**

ಪೊಲೀಸ್ ಉಪ ನಿರೀಕ್ಷಕರು, ಪಂಚನಹಳ್ಳಿ ಪೊಲೀಸ್ ಠಾಣೆ ಇವರ ಕ್ರೈಂ ನಂ.28/2008, ದಿನಾಂಕ:11.05.2008

**ಉಪಸ್ಥಿತರು:** ಕೆ.ಸಿ. ಹರಿದಾಸ್

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಪೊಲೀಸ್ ಉಪ ನಿರೀಕ್ಷಕರು, ಪಂಚನಹಳ್ಳಿ ಪೋಲಿಸ್ ಠಾಣೆ. | ರಮೇಶ್ ಬಿನ್ ದೇವೇಂದ್ರಪ್ಪ ಮತ್ತು ಇತರರು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11.05.2008 ರಂದು ಸಂಜೆ ಸುಮಾರು 7.30 ಗಂಟೆ ಸಮಯದಲ್ಲಿ ಪೊಲೀಸ್ ಉಪ ನಿರೀಕ್ಷಕರು, ಪಂಚನಹಳ್ಳಿ ಪೊಲೀಸ್ ಠಾಣೆ ಇವರು ಸಿಬ್ಬಂದಿ ಮತ್ತು ಪಂಚಾಯ್ತಿದಾರರೊಂದಿಗೆ, ಪಂಚನಹಳ್ಳಿ–ಹೊಸದುರ್ಗಾ ರಸ್ತೆಯಲ್ಲಿರುವ ಸರ್ಕಾರಿ ಹೊಸ ಆಸ್ಪತ್ರೆ ಕಟ್ಟಡದ ಮುಂಭಾಗ ಗಸ್ತು ನಿರ್ವಹಿಸುತ್ತಿದ್ದಾಗ, ಪಂಚನಹಳ್ಳಿ ಕಡೆಯಿಂದ ಒಂದು ಮೋಟಾರ್ ಬೈಕ್‌ನಲ್ಲಿ ಇಬ್ಬರು ವ್ಯಕ್ತಿಗಳು ಒಂದು ತುಂಬಿದ ಗೋಣಿಚೀಲವನ್ನು ಇಟ್ಟುಕೊಂಡು ಬರುತ್ತಿರುವುದನ್ನು ಗಮನಿಸಿ, ಅನುಮಾನದ ಮೇರೆಗೆ ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ಗೋಣಿಚೀಲದಲ್ಲಿ 180 ಮಿಲಿಯ 48 ಸೀಸೆ ರಾಜಾವಿಸ್ಕಿ ಬಾಟಲಿಗಳು ಇದ್ದು ಇವುಗಳ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿಗಳಾದ ರಮೇಶ್ ಬಿನ್ ದೇವೇಂದ್ರಪ್ಪ, ನೀಡುವಳ್ಳಿ ಗ್ರಾಮ, ಸಿಂಗಟಗೆರೆ ಹೋಬಳಿ, ಕಡೂರು ತಾಲ್ಲೂಕು ಮತ್ತು ಇನ್ನೊಬ್ಬ ವ್ಯಕ್ತಿ ಆನಂದ ಬಿನ್ ರಾಮಣ್ಣ, ನಿಡುವಳ್ಳಿ ಗ್ರಾಮ, ಸಿಂಗಟಗೆರೆ ಹೋಬಳಿ, ಕಡೂರು ತಾಲ್ಲೂಕು ಇವರುಗಳು ಯಾವುದೇ ಅಧಿಕೃತ ರಹದಾರಿ ಪತ್ರಗಳನ್ನಾಗಲಿ ಅಥವಾ ದಾಖಲಾತಿ ಪತ್ರಗಳನ್ನಾಗಲಿ ಹಾಜರುಪಡಿಸದೆ ಇದ್ದುದರಿಂದ, ಅಕ್ರಮವಾದುದೆಂದು ದೃಢಪಡಿಸಿಕೊಂಡು, ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ದೊರೆತ ಮದ್ಯವನ್ನು ವಾಹನ ಸಂಖ್ಯೆ: ಕೆಎ–18–ಜೆ–2057 (ಹಿರೋಹೊಂಡಾ ಮೋಟಾರ್ ಸೈಕಲ್) ರೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ ಕ್ರೈಂ ನಂ.28/2008 ರಲ್ಲಿ ಪ್ರಕರಣವನ್ನು ದಾಖಲಿಸಿ ವಶಪಡಿಸಿಕೊಂಡ ವಾಹನ ಮತ್ತು ಮದ್ಯವನ್ನು ಮುಂದಿನ ವಿಲೇವಾರಿ ಕುರಿತು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ನಡವಳಿಗಳನ್ನು ಮುಂದುವರೆಸಲಾಯಿತು.

ವಾಹನವು ಜಫ್ತಾಗಿ ಸುಮಾರು ಒಂದು ವರ್ಷ ಕಳೆದರೂ ಈ ಅವಧಿಯಲ್ಲಿ ವಾಹನದ ಕಾನೂನು ಬದ್ಧ ವಾರಸುದಾರರಾಗಲಿ ಅಥವಾ ವಾಹನದ ಮಾಲೀಕರಾಗಲೀ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ಹಕ್ಕು ಸಾಧಿಸದೆ ಇದ್ದುದರಿಂದ, ಅಂತಿಮವಾಗಿ ವಾಹನದ ಮಾಲೀಕರಿಗೆ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿಗಳೊಂದಿಗೆ ಹಾಜರಾಗಿ ಪ್ರಾಧಿಕಾರಕ್ಕೆ ಲಿಖಿತ ಮನವಿ ಸಲ್ಲಿಸಿ ವಾಹನದ ಮೇಲೆ ಹಕ್ಕು ಸಾಧಿಸಲು ಏಳು ದಿನಗಳ ಕಾಲಾವಕಾಶ ನೀಡಿ, "ಸಂಬಂಧಿಸಿದವರ ತಿಳುವಳಿಕೆಗಾಗಿ" ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಪತ್ರಿಕಾ ಪ್ರಕಟಣೆ ದಿನಾಂಕ:10.06.2009 ರಂದು ರಾಜ್ಯ ಮಟ್ಟದ ದಿನಪತ್ರಿಕೆಯಾದ ವಿಜಯ ಕರ್ನಾಟಕ ಮತ್ತು ಜಿಲ್ಲಾ ಮಟ್ಟದ ದಿನಪತ್ರಿಕೆಯಾದ ಜನಮಿತ್ರ ಪತ್ರಿಕೆಯಲ್ಲಿ ಪ್ರಚಾರಗೊಂಡಿರುತ್ತದೆ. ಪ್ರಚಾರಗೊಂಡ ನಂತರದಲ್ಲೂ ವಾಹನದ ಮಾಲೀಕರು ಪ್ರಾಧಿಕಾರದ ಮುಂದೆ ಹಾಜರಾಗಿ ಲಿಖಿತ ಮನವಿಯನ್ನು ಸಲ್ಲಿಸಿರುವುದಿಲ್ಲ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿರುವುದರಿಂದ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾದ್ಯವಾಗಿದ್ದಲ್ಲಿ, ಯಾರೋಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳ ಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ 43(ಎ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಪಂಚನಹಳ್ಳಿ ಪೊಲೀಸ್ ಠಾಣೆ, ಇವರ ಕ್ರೈಂ ನಂ.28/2008, ದಿನಾಂಕ:11.05.2008ರಲ್ಲಿ ವಶಪಡಿಸಿಕೊಳ್ಳಲಾದ ವಾಹನ ಸಂಖ್ಯೆ: ಕೆಎ–18–ಜೆ–2057 (ಹಿರೋಹೊಂಡ ಬೈಕ್) ಹಾಗೂ ಮದ್ಯದ ಪೈಕಿ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 8.460 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 26ನೇ ಜೂನ್, 2009 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿ.ಆರ್.653

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/221/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ|| ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| ಫಿರ್ಯಾದುದಾರರು | ವಿರುದ್ಧ | ಪ್ರತಿವಾದಿ/ಆರೋಪಿ |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಹುಲ್ಲಹಳ್ಳಿ ಪೊಲೀಸ್ ಠಾಣೆ, ನಂಜನಗೂಡು ತಾಲ್ಲೂಕು. | | ರವಿ ಬಿನ್ ಚಿನ್ನಸ್ವಾಮಿ, ಮಾದಪುರ ಗ್ರಾಮ, ನಂಜನಗೂಡು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:14.10.2008 ರಂದು ಮಧ್ಯಾಹ್ನ 11:30 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಹುಲ್ಲಹಳ್ಳಿ ಪೊಲೀಸ್ ಠಾಣೆ, ನಂಜನಗೂಡು ತಾಲ್ಲೂಕು, ಇವರು ನಂಜನಗೂಡು ತಾಲ್ಲೂಕು, ಶಿರಮಳ್ಳಿ ಗೇಟ್ ಬಳಿ ಕೆಎ–09/ವಿ–8613 ನೋಂದಣಿ ಸಂಖ್ಯೆಯ ಟಿ.ವಿ.ಎಸ್.ಎಕ್ಸ್‌ಲ್ ವಾಹನದಲ್ಲಿ ಅಕ್ರಮವಾಗಿ 8.640 ಲೀ. ಓರಿಜಿನಲ್ ಚಾಯ್ಸ್ ವಿಸ್ಕಿ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಫ್ತು ಮಾಡಿ, ಠಾಣಾ ಪ್ರಕರಣ ಸಂಖ್ಯೆ: 17/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಮೊಕದ್ದಮೆ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:20.10.2008 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:21.10.2008 ರಂದು ನಂಜನಗೂಡು ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಮೈಸೂರು (ಪೂರ್ವ) ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:21.10.2008ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ

ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (9) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/221/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಗ್ರಾಮಾಂತರ ಠಾಣೆ, ನಂಜನಗೂಡು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ: 17/2008, ದಿನಾಂಕ:14.10.2008 ರಂದು ವಶಪಡಿಸಿಕೊಂಡ ಕೆಎ–09/ವಿ–8613 ನೋಂದಣಿ ಸಂಖ್ಯೆಯ ಟಿ.ವಿ.ಎಸ್.ಎಕ್ಸಲ್ ಸೂಪರ್ ವಾಹನ ಮತ್ತು 8.640 ಲೀ. ಮದ್ಯವನ್ನು (ಮಾದರಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.919

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ: ಡಿಟಿಸಿಆರ್/92/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು:** ಡಾ॥ ವೈ.ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಫಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ/ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಜಯಪುರ ಪೊಲೀಸ್ ಠಾಣೆ, ಮೈಸೂರು. | | ರಾಜೇಶ್ ಬಿನ್ ಲೇ॥ ಬಸವರಾಜು, ಮಾರ್ಬಳ್ಳಿ ಗ್ರಾಮ, ಮೈಸೂರು ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:22.08.2007 ರಂದು ಸಂಜೆ 04:00 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಜಯಪುರ ಪೊಲೀಸ್ ಠಾಣೆ, ಮೈಸೂರು ತಾಲ್ಲೂಕು, ಇವರು ಮೈಸೂರು ತಾಲ್ಲೂಕು, ಮೈಸೂರು ಕಡೆಯಿಂದ ಉದ್ಬೂರಿಗೆ ಹೋಗುವ ರಸ್ತೆಯಲ್ಲಿ ಕೆಎ–09/ಆರ್–316 ನೋಂದಣಿ ಸಂಖ್ಯೆಯ ಹೀರೋ ಪುಕ್ ವಾಹನದಲ್ಲಿ ಅಕ್ರಮವಾಗಿ 17.280 ಲೀ. ವಿವಿಧ ಮಾದರಿಯ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೊಕದ್ದಮೆ ಸಂಖ್ಯೆ: 72/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:28.08.2008 ರಂದು ಕೋರಿರುತ್ತಾರೆ. ಅಂತೆಯೇ ಅದೇ ದಿನದಂದು ಮೈಸೂರು ವಲಯ ನಂ.3ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ಮೈಸೂರು ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:28.08.2008 ಮತ್ತು 27.11.2008 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (22) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಡಿಟಿಸಿಆರ್/92/2008–09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ನಿರೀಕ್ಷಕರು, ಮಂಡಿ ಪೊಲೀಸ್ ಠಾಣೆ, ಮೈಸೂರು ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:72/2008, ದಿನಾಂಕ:22.08.2007 ರಂದು ವಶಪಡಿಸಿಕೊಂಡ ಕೆಎ–09/ಆರ್–316 ನೋಂದಣಿ ಸಂಖ್ಯೆಯ ಹೀರೋ ಪುಕ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ.ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.920

**ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು ಠಾಣಾಧಿಕಾರಿ, ದೇವರ ಜೀವನಹಳ್ಳಿ ಪೊಲೀಸ್ ಠಾಣೆ, ಬೆಂಗಳೂರು ನಗರ**
**ವಾರಸುದಾರರಿಲ್ಲದ ಮಾಲು ಮತ್ತು ವಾಹನಗಳ ವಿವರ**

| Sl. No. | Cr. No. & C.Miss No. | P.F. Number | Type of Vehicle etc., | Reg.No.Chassis No. and Engine No. |
|---|---|---|---|---|
| 1. | 392/98 U/S 98 K.P.Act. | 188/08 | Bajaj pulsar block colour | KA-03-EL-8049 Cha No. MD2DIIDIIZZNCII36841 Eng No. DHGBNH74987 |
| 2. | 392/98 U/S 98 K.P. Act | 188/08 | TVS Victor block colour | KA-03-AC-7868 Cha No. MD625AF1061K34232 Eng No.OF1K61546460 |
| 3. | 81/09 U/S 98 K.P.Act | 40/09 | Honda Active white colour | KA-03-EA-1989 Cha No.ME4JF085F48477073 Eng No.JFO8E0490521 |

| Sl. No. | Cr. No. & C.Miss No. | P.F. Number | Type of Vehicle etc., | Reg.No.Chassis No. and Engine No. |
|---|---|---|---|---|
| 4. | 81/09 U/S 98 K.P. Act | 40/09 | Suzuki feiro silver colour | KA-02-EA-7462<br>Cha No. M1204F133319<br>Eng No.M1204M135144 |
| 5. | 59/09 U/S 98 K.P.Act | 30/09 | Hundai Santro Car red colour | KA-50-M-1889<br>Cha No. MALAC51HX6M839990<br>Eng No. G4HG6M803745 |
| 6. | 59/09 U/S 98 K.P.Act | 31/09 | Hundai Santro Car Silver colour | KA-01-MB-7383<br>Cha No. MALAB51HP6M837905<br>Eng No. G4HG6M805515 |
| 7. | 186/09 U/S 98 K.P. Act | 86/09 | Suzuki samurai block colour | KA-04-H-3183<br>Cha No.7703F775169<br>Eng No.7703M820968 |
| 8. | 199/09 U/S 98 K.P. Act | 91/09 | Hero Honda orange colour | KA-06-L-4601<br>Cha No.02J20C02723<br>Eng No.02II18M14050 |
| 9. | 199/09 U/S 98 K.P.Act | 91/09 | TVS Star City red colour | KA-06-EN-5518<br>Cha No. MD625KF5761A44892<br>Eng No.AF5A61155139 |
| 10. | 199/09 U/S 98 K.P. Act | 91/09 | Hero Honda Fashion red colour | KA-06-W-8201<br>Cha No.06B09C34087<br>Eng No.06B08M23194 |
| 11. | 199/09 U/S 98 K.P. Act | 91/09 | TVS Scooty White colour | KA-05-EC-2374<br>Cha No.K00AK379111<br>Eng No.K00AM373850 |
| 12. | 199/09 U/S 98 K.P. Act | 91/09 | Kenitic Honda block colour | KA-02-W-8772<br>Cha No.NIFAG887064<br>Eng No.NIEQG882374 |
| 13. | C-Miss No. 261/09 | 59/09 | Hero Honda Splender block colour | KA-04-F-4651<br>Cha No.00L20F22677<br>Eng No.00L18F21768 |
| 14. | C-Miss No.159/09 | 34/09 | Bajaj chethak green colour | KA-04-Q-7597<br>Cha No.06F96B64302<br>Eng No.06M96871357 |
| 15. | C-Miss No.284/09 | 66/09 | Hero Honda red colour | KA-04-S-5395<br>Cha No. NIL<br>Eng No.961112F03270 |
| 16. | C-miss No.285/09 | 67/09 | Auto Rickshaw block colour | KA-05-B-7182<br>Cha No.24FBJM05936<br>Eng No.AEMBJM12607 |
| 17. | C-Miss No.286/09 | 68/09 | TVS Scooty block colour | KA-03-U-7048<br>Cha No.K97GF119496<br>Eng No.KA97GM121161 |

| Sl. No. | Cr. No. & C.Miss No. | P.F. Number | Type of Vehicle etc., | Reg.No.Chassis No. and Engine No. |
|---|---|---|---|---|
| 18. | C-Miss No.286/09 | 68/09 | Bajaj chethak blue colour | KA-02-Q-8331<br>Cha No.06F95J08896<br>Eng No.NIL |
| 19. | 331/08 U/S 98 K.P. Act | 146/08 | TVS Scooty blue colour | KA-03-7048<br>Cha No.K97GF119496<br>Eng No.K97GM121161 |
| 20. | 362/08 U/S 98 K.P.Act | 170/08 | Kenitic Honda block colour | KA-05-Y-3323<br>Cha No.NIL<br>Eng No.885489NIEQH |
| 21. | C-Miss No.49/09 | 16/09 | H.P. Laptop computer block colour | - |
| 22. | 81/09 U/S 98 K.P.Act | 39/09 | 2 Car stireo company name nil | - |
| 23. | 81/09 U/S 98 K.P. Act | 39/09 | 2 L.C.D. Player Company name nil | - |

ಪೊಲೀಸ್ ಇನ್ಸ್‌ಪೆಕ್ಟರ್ ಮತ್ತು
ಠಾಣಾಧಿಕಾರಿ, ದೇವರ ಜೀವನಹಳ್ಳಿ
ಪೊಲೀಸ್ ಠಾಣೆ, ಬೆಂಗಳೂರು ನಗರ.

ಪಿ.ಆರ್.907

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್‌ರವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಅಧಿಸೂಚನೆ**

**ಸಂಖ್ಯೆ: ಅ.ಕಾ.ಅ.ಉ.ಆ.ಮಾ.ಹ/17/2009–10, ದಿನಾಂಕ:16ನೇ ಜುಲೈ, 2009**

ಶಿವಮೊಗ್ಗ ಜಿಲ್ಲೆಯ ಜಿಲ್ಲಾ ಕಛೇರಿಯ ಮತ್ತು ಅಧೀನ ಕಛೇರಿಗಳಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005ರ ಸೆಕ್ಷನ್ 5(1), 5(2), 19(1)ರ ಪ್ರಕಾರ 'ಸಾರ್ವಜನಿಕ ಮಾಹಿತಿ ಅಧಿಕಾರಿ', 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಮತ್ತು 'ಮೇಲ್ಮನವಿ ಪ್ರಾಧಿಕಾರಗಳನ್ನು' ಈ ಕೆಳಕಂಡಂತೆ ನೇಮಕ ಮಾಡಿ ಅಧಿಸೂಚನೆ ಹೊರಡಿಸಿದೆ.

| ಕ್ರ. ಸಂ. | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 5(1)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 5(2)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 19(1)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 1. | ಅಬಕಾರಿ ಉಪ ಆಯುಕ್ತರ ಕಛೇರಿ, ಶಿವಮೊಗ್ಗ ಜಿಲ್ಲೆ. | ಅಬಕಾರಿ ಉಪ ಅಧೀಕ್ಷಕರು ಅಬಕಾರಿ ಉಪ ಆಯುಕ್ತರ ಕಛೇರಿ, ಶಿವಮೊಗ್ಗ ಜಿಲ್ಲೆ. | ಅಬಕಾರಿ ನಿರೀಕ್ಷಕರು ಅಬಕಾರಿ ಉಪ ಆಯುಕ್ತರ ಕಛೇರಿ, ಶಿವಮೊಗ್ಗ ಜಿಲ್ಲೆ. | ಅಬಕಾರಿ ಉಪ ಆಯುಕ್ತರು ಅಬಕಾರಿ ಉಪ ಆಯುಕ್ತರ ಕಛೇರಿ, ಶಿವಮೊಗ್ಗ ಜಿಲ್ಲೆ. |
| 2. | ಅಬಕಾರಿ ಉಪ ಅಧೀಕ್ಷಕರ ಕಛೇರಿ, ಶಿವಮೊಗ್ಗ ಉಪವಿಭಾಗ. | ಅಬಕಾರಿ ನಿರೀಕ್ಷಕರು ಶಿವಮೊಗ್ಗ ಉಪವಿಭಾಗ. | ಅಬಕಾರಿ ಉಪ ನಿರೀಕ್ಷಕರು ಶಿವಮೊಗ್ಗ ಉಪವಿಭಾಗ | ಅಬಕಾರಿ ಉಪ ಅಧೀಕ್ಷಕರು ಶಿವಮೊಗ್ಗ ಉಪವಿಭಾಗ. |
| 3. | ಅಬಕಾರಿ ಉಪ ಅಧೀಕ್ಷಕರ ಕಛೇರಿ, ತೀರ್ಥಹಳ್ಳಿ ಉಪವಿಭಾಗ. | ಅಬಕಾರಿ ನಿರೀಕ್ಷಕರು ತೀರ್ಥಹಳ್ಳಿ ಉಪವಿಭಾಗ | ಅಬಕಾರಿ ಉಪ ನಿರೀಕ್ಷಕರು ತೀರ್ಥಹಳ್ಳಿ ಉಪವಿಭಾಗ. | ಅಬಕಾರಿ ಉಪ ಅಧೀಕ್ಷಕರು ತೀರ್ಥಹಳ್ಳಿ ಉಪವಿಭಾಗ |

| ಕ್ರ. ಸಂ. | ಕಛೇರಿ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 5(1)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 5(2)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯಿದೆ 2005ರ ಸೆಕ್ಷನ್ 19(1)ರ ಪ್ರಕಾರ ಜಿಲ್ಲಾ ಮಟ್ಟದಲ್ಲಿ ಮೇಲ್ಮನವಿ ಪ್ರಾಧಿಕಾರಿ |
|---|---|---|---|---|
| 4. | ಅಬಕಾರಿ ಉಪ ಅಧೀಕ್ಷಕರ ಕಛೇರಿ, ಸಾಗರ ಉಪವಿಭಾಗ. | ಅಬಕಾರಿ ನಿರೀಕ್ಷಕರು, ಸಾಗರ ಉಪವಿಭಾಗ. | ಅಬಕಾರಿ ಉಪ ನಿರೀಕ್ಷಕರು, ಸಾಗರ ಉಪವಿಭಾಗ. | ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪವಿಭಾಗ. |
| 5. | ಅಬಕಾರಿ ನಿರೀಕ್ಷಕರ ಕಛೇರಿ, ಶಿವಮೊಗ್ಗ ವಲಯ ನಂ.1 | ಅಬಕಾರಿ ನಿರೀಕ್ಷಕರು, ಶಿವಮೊಗ್ಗ ವಲಯ ನಂ.1 | ಅಬಕಾರಿ ಉಪ ನಿರೀಕ್ಷಕರು, ಶಿವಮೊಗ್ಗ ವಲಯ ನಂ.1 | ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪವಿಭಾಗ. |
| 6. | ಅಬಕಾರಿ ನಿರೀಕ್ಷಕರ ಕಛೇರಿ, ಶಿವಮೊಗ್ಗ ವಲಯ ನಂ.2 | ಅಬಕಾರಿ ನಿರೀಕ್ಷಕರು, ಶಿವಮೊಗ್ಗ ವಲಯ ನಂ.2 | ಅಬಕಾರಿ ಉಪ ನಿರೀಕ್ಷಕರು, ಶಿವಮೊಗ್ಗ ವಲಯ ನಂ.2 | ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪವಿಭಾಗ. |
| 7. | ಅಬಕಾರಿ ನಿರೀಕ್ಷಕರ ಕಛೇರಿ, ಭದ್ರಾವತಿ ವಲಯ. | ಅಬಕಾರಿ ನಿರೀಕ್ಷಕರು, ಭದ್ರಾವತಿ ವಲಯ. | ಅಬಕಾರಿ ಉಪ ನಿರೀಕ್ಷಕರು, ಭದ್ರಾವತಿ ವಲಯ. | ಅಬಕಾರಿ ಉಪ ಅಧೀಕ್ಷಕರು, ಶಿವಮೊಗ್ಗ ಉಪವಿಭಾಗ. |
| 8. | ಅಬಕಾರಿ ನಿರೀಕ್ಷಕರ ಕಛೇರಿ, ಶಿಕಾರಿಪುರ ವಲಯ. | ಅಬಕಾರಿ ನಿರೀಕ್ಷಕರು, ಶಿಕಾರಿಪುರ ವಲಯ. | ಅಬಕಾರಿ ಉಪ ನಿರೀಕ್ಷಕರು, ಶಿಕಾರಿಪುರ ವಲಯ. | ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪವಿಭಾಗ. |
| 9. | ಅಬಕಾರಿ ನಿರೀಕ್ಷಕರ ಕಛೇರಿ, ಸಾಗರ ವಲಯ. | ಅಬಕಾರಿ ನಿರೀಕ್ಷಕರು, ಸಾಗರ ವಲಯ. | ಅಬಕಾರಿ ಉಪ ನಿರೀಕ್ಷಕರು, ಸಾಗರ ವಲಯ. | ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪವಿಭಾಗ. |
| 10. | ಅಬಕಾರಿ ನಿರೀಕ್ಷಕರ ಕಛೇರಿ, ಸೊರಬ ವಲಯ. | ಅಬಕಾರಿ ನಿರೀಕ್ಷಕರು, ಸೊರಬ ವಲಯ. | ಅಬಕಾರಿ ಉಪ ನಿರೀಕ್ಷಕರು, ಸೊರಬ ವಲಯ. | ಅಬಕಾರಿ ಉಪ ಅಧೀಕ್ಷಕರು, ಸಾಗರ ಉಪ ವಿಭಾಗ. |
| 11. | ಅಬಕಾರಿ ನಿರೀಕ್ಷಕರ ಕಛೇರಿ, ತೀರ್ಥಹಳ್ಳಿ ವಲಯ. | ಅಬಕಾರಿ ನಿರೀಕ್ಷಕರು, ತೀರ್ಥಹಳ್ಳಿ ವಲಯ. | ಅಬಕಾರಿ ಉಪ ನಿರೀಕ್ಷಕರು, ತೀರ್ಥಹಳ್ಳಿ ವಲಯ. | ಅಬಕಾರಿ ಉಪ ಅಧೀಕ್ಷಕರು, ತೀರ್ಥಹಳ್ಳಿ ಉಪವಿಭಾಗ. |
| 12. | ಅಬಕಾರಿ ನಿರೀಕ್ಷಕರ ಕಛೇರಿ, ಹೊಸನಗರ ವಲಯ. | ಅಬಕಾರಿ ನಿರೀಕ್ಷಕರು, ಹೊಸನಗರ ವಲಯ. | ಅಬಕಾರಿ ಉಪ ನಿರೀಕ್ಷಕರು, ಹೊಸನಗರ ವಲಯ. | ಅಬಕಾರಿ ಉಪ ಅಧೀಕ್ಷಕರು, ತೀರ್ಥಹಳ್ಳಿ ಉಪವಿಭಾಗ. |

ಡೆಪ್ಯೂಟಿ ಕಮೀಷನರ್ ಆಫ್
ಎಕ್ಸೈಜ್, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್.908

**ಕೃಷಿ ಇಲಾಖೆ**
**ಜಿಲ್ಲಾ ಪಂಚಾಯತ್, ದಾವಣಗೆರೆ**
**ಜಂಟಿ ಕೃಷಿ ನಿರ್ದೇಶಕರ ಕಛೇರಿ, ದಾವಣಗೆರೆ**
**ನಂ.ಸಿಬ್ಬಂದಿ–2/ಅ.ಗೈ.ಹಾ./ವಿ.ವ–17/09–10/2397–03, ದಿನಾಂಕ:31ನೇ ಜುಲೈ, 2009**

**ವಿಷಯ:** ಶ್ರೀ ಎಮ್.ಸಿ. ಗಣಾಚಾರಿ, ಗ್ರೂಪ್ 'ಡಿ' ನೌಕರರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ದಾವಣಗೆರೆ ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಬಗ್ಗೆ.

**ಉಲ್ಲೇಖ:**1) ಈ ಕಛೇರಿ ಮೆಮೊ ಸಂ:ಸಿ–2/ಎಂ.ಸಿ.ಗ/ಸಿ.ಆರ್.17/08–09/3 3269, ದಿನಾಂಕ:27.09.2008.

2) ಈ ಕಛೇರಿಯ ಪತ್ರದ ಸಂಖ್ಯೆ: ಸಿಬ್ಬಂದಿ–2/ಎಂ.ಸಿ.ಗ./'ಡಿ' ನೌಕರ/ಸಿ.ಆರ್–17/08–09/3958–60 ದಿನಾಂಕ:21.10.2008 ಹಿರಿಯ ಸಹಾಯಕ ನಿರ್ದೇಶಕರು, ಜಿಲ್ಲಾ ವಾರ್ತಾ ಮತ್ತು ಪ್ರಚಾರ ಇಲಾಖೆ, ದಾವಣಗೆರೆ ಇವರ ಮೂಲಕ ಪ್ರಕಟಣೆ (ಜನತಾವಾಣಿ ಸ್ಥಳೀಯ ಪತ್ರಿಕೆ ಪ್ರಕಟಣೆ ದಿನಾಂಕ:15.11.2008ರಲ್ಲಿ ಪ್ರಕಟವಾಗಿರುತ್ತದೆ. ಮತ್ತು ವಿಜಯ ಕರ್ನಾಟಕ ಪತ್ರಿಕೆ ದಿನಾಂಕ:06.11.2008ರಂದು ಪ್ರಕಟವಾಗಿರುತ್ತದೆ)

3) ಈ ಕಛೇರಿಯ ನೋಟೀಸ್–1 ದಿನಾಂಕ:29/30.01.2009.

4) ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ–2/ವಿವ–17/ಎಂ.ಸಿ.ಗ./'ಡಿ'/ವಾ.ಬ.ಗ್ಯೆ./6314–18/08–09, ದಿನಾಂಕ:26.02.03.2009/02.03.2009.

5) ಈ ಕಛೇರಿಯ ನೋಟೀಸ್–2 ದಿನಾಂಕ:26/28.03.2009.

6) ಈ ಕಛೇರಿಯ ನೋಟೀಸ್–3 ದಿನಾಂಕ:01/02.06.2009.

7) ಈ ಕಛೇರಿಯ ಪ್ರಕಟಣೆ ದಿನಾಂಕ:25.07.2009.

8) ಈ ಕಛೇರಿ ಟಿಪ್ಪಣಿ ಮತ್ತು ಆದೇಶ ದಿನಾಂಕ:31.07.2009.

**ಪ್ರಸ್ತಾವನೆ:**

ಶ್ರೀ ಎಂ.ಸಿ. ಗಣಾಚಾರಿ ತಂದೆ ಚಂದ್ರಶೇಖರಯ್ಯ ಗಣಾಚಾರಿ, 'ಡಿ' ದರ್ಜೆ ನೌಕರರು ಇವರು ಈ ಕಛೇರಿಯಲ್ಲಿ 'ಡಿ' ದರ್ಜೆ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಲು ಇಲಾಖಾ ಆದೇಶ ಸಂಖ್ಯೆ: ಸಿ–2/'ಡಿ'/ಸ್ಥ.ನಿ/64/08–09 ದಿನಾಂಕ:30.08.2008ರ ಆದೇಶದ ಮೇರೆಗೆ ಸ್ಥಳ ನಿಯುಕ್ತಿಗೊಂಡು ಈ ಕಛೇರಿಯಲ್ಲಿ ದಿನಾಂಕ:01.09.2008ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿದ್ದರು.

ಶ್ರೀ ಎಂ.ಸಿ. ಗಣಾಚಾರಿ (ಮಂಜುನಾಥಯ್ಯ, ಚಂದ್ರಶೇಖರಯ್ಯ ಗಣಾಚಾರಿ) ಇವರು ದಿನಾಂಕ:16.09.2008 ರಿಂದ 27.09.2008 (ಮುಂದುವರೆದಿದೆ) ರವರೆಗೂ ಕಛೇರಿಯ ದೈನಂದಿನ ಕೆಲಸಗಳಿಗೆ ಅನಧಿಕೃತ ಗೈರು ಹಾಜರಾಗಿದ್ದು, ಕರ್ತವ್ಯಕ್ಕೆ ಹಾಜರಾಗುವಂತೆ ಉಲ್ಲೇಖ (1)ರ ಮೆಮೊದಲ್ಲಿ ನೋಂದಾಯಿಸಿದ ಅಂಚೆ ಸ್ವೀಕೃತಿ ಸಹಿತ ನೌಕರರ ಖಾಯಂ ವಿಳಾಸ ಹೊಸ ಯಲ್ಲಾಪುರ, ಮುಂಡೋಣಿ (ಬಡಾವಣೆ), ಧಾರವಾಡ–1 ಇಲ್ಲಿಗೆ ಕಳುಹಿಸಲಾಗಿತ್ತು, ನೊಂದಣಿ ಪತ್ರವು ನೌಕರರಿಗೆ ಜಾರಿಯಾಗದೆ ಅಂಚೆ ಕಛೇರಿ ಮೂಲಕ ಈ ಕಛೇರಿಗೆ ವಾಪಾಸ್ಸು ಬಂದಿರುತ್ತದೆ. (ಇದನ್ನು ದಾಖಲೆ–1 ಎಂದು ಗುರುತಿಸಿದೆ).

ಉಲ್ಲೇಖ (2)ರ ಪತ್ರದಲ್ಲಿ ಕಛೇರಿಯ ನೌಕರರ ಗೈರು ಹಾಜರಿ ದಿನಾಂಕ:16.09.2008 ರಿಂದ 21.10.2008 (ಮುಂದುವರೆದಿದೆ) ರವರೆಗೆ ಗೈರು ಹಾಜರಾದ ಬಗ್ಗೆ ಹಿರಿಯ ಸಹಾಯಕ ನಿರ್ದೇಶಕರು, ಜಿಲ್ಲಾ ವಾರ್ತಾ ಮತ್ತು ಪ್ರಚಾರ ಇಲಾಖೆ, ದಾವಣಗೆರೆ ಇವರಿಗೆ ನೀಡಿ ವಿಜಯ ಕರ್ನಾಟಕ ಕನ್ನಡ ದಿನಪತ್ರಿಕೆ ಹಾಗೂ ಸ್ಥಳೀಯ ಪತ್ರಿಕೆಯೊಂದರಲ್ಲಿ ಪ್ರಕಟಿಸುವಂತೆ ಕೋರಲಾಗಿ, ಸದರಿಯವರು ವಿಜಯ ಕರ್ನಾಟಕ ದಿನಪತ್ರಿಕೆ ದಿನಾಂಕ:6.11.2008 ಮತ್ತು ಸ್ಥಳೀಯ ದಿನಪತ್ರಿಕೆಯಾದ ಜನತಾವಾಣಿಯಲ್ಲಿ ದಿನಾಂಕ:05.11.2008ರಲ್ಲಿ ಪ್ರಕಟ ಪಡಿಸಿದ್ದು ಶ್ರೀ ಎಂ.ಸಿ. ಗಣಾಚಾರಿ 'ಡಿ' ದರ್ಜೆ ಆದ ನೀವು ಸೇವೆಗೆ ಹಾಜರಾಗದಿದ್ದಲ್ಲಿ ಸೇವೆಯಿಂದ ವಜಾಮಾಡಲು ಕ್ರಮಕೈಗೊಳ್ಳಲಾಗುವುದೆಂದು ಪ್ರಕಟಿಸಲಾಗಿದೆ. ಪತ್ರದ ಪ್ರತಿಯನ್ನು ನಿಮ್ಮ ಸ್ವಂತ ವಿಳಾಸಕ್ಕೆ ನೊಂದಣಿ ಅಂಚೆ ಪಾವತಿಯೊಂದಿಗೆ ಕಳುಹಿಸಲಾಗಿದ್ದು ಪತ್ರವು ಸ್ವೀಕೃತವಾಗದೆ ಈ ಕಛೇರಿಗೆ ವಾಪಾಸು ಬಂದಿರುತ್ತದೆ (ದಾಖಲೆ–2 ಎಂದು ಗುರುತಿಸಿದೆ.) ನೀವು ದಿನಾಂಕ:05.11.2008ರಂದು ಹಾಜರಾಗಿ 12.01.2009 ರವರೆಗೆ ಕರ್ತವ್ಯ ನಿರ್ವಹಿಸಿದ್ದನ್ನು ಕಛೇರಿಯು ನಿಮ್ಮ ಕೋರಿಕೆ ಮೇರೆಗೆ ಪರಿಗಣಿಸಲಾಗಿತ್ತು.

ಆದಾಗ್ಯೂ ದಿನಾಂಕ:13.01.2009 ರಿಂದ 29.01.2009ರವರೆಗೆ ಪುನಃ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವುದು ನಿಮ್ಮ ಗೈರು ಹಾಜರಿ ಬಗ್ಗೆ ಕಛೇರಿಯು ನೋಟೀಸ್–1 ದಿನಾಂಕ:29.01.2009ರ ಮೂಲಕ ನಿಮ್ಮ ಸ್ವಂತ ವಿಳಾಸಕ್ಕೆ ಕಳುಹಿಸಲಾಗಿತ್ತು. ಅಲ್ಲದೆ ಅನಧಿಕೃತ ಗೈರು ಹಾಜರಿಯನ್ನು ಕಛೇರಿಯು ದಿನಾಂಕ:26.02.2009ರ ಆದೇಶದಲ್ಲಿ ನಿಮ್ಮ ಗೈರು ಹಾಜರಿ ದಿನಾಂಕ:16.09.2008 ರಿಂದ 04.11.2008ರವರೆಗೆ "ಅನಧಿಕೃತ ಗೈರುಹಾಜರಿ ಎಂದು" ಪರಿಗಣಿಸಿ, ದಂಡನೆ ವಿಧಿಸಿ, ಖಾಯಂ ಆಗಿ ಮೂರು ವಾರ್ಷಿಕ ಬಡ್ತಿಗಳನ್ನು ತಡೆಹಿಡಿದು ನಿಮ್ಮ ಸೇವಾ ಪುಸ್ತಕದಲ್ಲಿ ದಾಖಲಿಸಿ, ನಿಮಗೂ ಸಹ ಮಾಹಿತಿ ನೀಡಲಾಗಿತ್ತು. ಆದಾಗ್ಯೂ ನೀವು ಈ ಕಛೇರಿಯ ಯಾವುದೇ ನಿರ್ದೇಶನಗಳನ್ನು ಗಣನೆಗೆ ತೆಗೆದುಕೊಳ್ಳದೆ ಪುನಃ ದಿನಾಂಕ:13.01.2009 ರಿಂದ 31.01.2009 ಹಾಗೂ ದಿನಾಂಕ:07.02.2009 ರಿಂದ 25.02.2009ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು, ನೋಟೀಸ್–2 ದಿನಾಂಕ:26/28.03.2009ರಲ್ಲಿ ನೊಂದಾಯಿಸಿದ ಅಂಚೆ ಮುಖಾಂತರ ವಾಸಸ್ಥಳ ದಾವಣಗೆರೆ, ಸ್ವವಿಳಾಸ ಧಾರವಾಡ ಮತ್ತು ಗದಗ, ವಿಳಾಸಗಳಿಗೆ ಕಳುಹಿಸಲಾದ ಪತ್ರಗಳು ಈ ಕಛೇರಿಗೆ ಹಿಂತಿರುಗಿ ಬಂದಿರುತ್ತದೆ. (ಇದನ್ನು ದಾಖಲೆ–3 ಎಂದು ಗುರುತಿಸಿದೆ).

ಕಛೇರಿಯ ನೋಟೀಸ್–3 ದಿನಾಂಕ:01.06.2009ರಲ್ಲಿ ಪುನಃ ನೀವು 16.03.2009 ರಿಂದ 01.06.2009 (ಮುಂದುವರೆದಿದೆ) ಗೈರು ಹಾಜರಾದ ಬಗ್ಗೆ ದಾವಣಗೆರೆ, ಧಾರವಾಡ ಮತ್ತು ಗದಗ ವಿಳಾಸಗಳಿಗೆ ಕಳುಹಿಸಿದ

ನೊಂದಾಯಿಸಿದ ಅಂಚೆ ಸ್ವೀಕೃತಿಯೊಂದಿಗೆ ನೋಟೀಸ್ ಕಳುಹಿಸಿ ನಿಮ್ಮನ್ನು ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸುವ ಬಗ್ಗೆ ಸ್ಪಷ್ಟಪಡಿಸಲಾಗಿತ್ತು. ಇದರಲ್ಲಿ ಧಾರವಾಡಕ್ಕೆ ಕಳುಹಿಸಲಾಗಿದ್ದ ಪತ್ರವನ್ನು ಮಾತ್ರ ದಿನಾಂಕ:05.06.2009ರಲ್ಲಿ ಸ್ವೀಕರಿಸಿದ್ದು, ದಿನಾಂಕ:16.03.2009 ರಿಂದ ದಿನಾಂಕ:07.06.2009 ರವರೆಗೆ ಹಾಗೂ ದಿನಾಂಕ:11.06.2009 ರಿಂದ 23.07.2009 ರವರೆಗೆ (ಮುಂದುವರೆದಿದೆ) ಪುನಃ ಅನಧಿಕೃತ ಗೈರು ಹಾಜರಿಯಲ್ಲೇ ಉಳಿದಿರುತ್ತೀರಿ, ನೀವು ಈ ಕಛೇರಿಯ ಆದೇಶಗಳನ್ನು ಸಂಪೂರ್ಣ ನಿರ್ಲಕ್ಷಿಸಿ, ಕರ್ತವ್ಯ ಲೋಪ ಮಾಡಿರುವುದಲ್ಲದೇ ಕಛೇರಿ ಆದೇಶಗಳ ಉಲ್ಲಂಘನೆ ನಿರ್ಲಕ್ಷತನ ತೋರಿರುವುದು ಸ್ಪಷ್ಟವಾಗಿರುತ್ತದೆ. ಹಾಗೂ ಸಾಬೀತುಪಡಿಸಿದ್ದು ನಿಮ್ಮ ಉದಾಸೀನತೆ, ನಿರ್ಲಕ್ಷ ಮನೋಭಾವ ಕಛೇರಿಯ ಆದೇಶಗಳ ಉಲ್ಲಂಘನೆ, ಕರ್ತವ್ಯಲೋಪ, ಹಾಗೂ ಅನಧಿಕೃತ ಗೈರು ಹಾಜರಿ ಲಕ್ಷಣಗಳು ನಿಯಮಗಳ ವಿರುದ್ಧವಾಗಿರುತ್ತವೆ. ತನ್ನಿಮಿತ್ತ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಶ್ರೀ ಎಂ.ಸಿ.ಗಣಾಚಾರಿ 'ಡಿ' ದರ್ಜೆ ನೌಕರರು, ಜಂಟಿ ಕೃಷಿ ನಿರ್ದೇಶಕರ ಕಛೇರಿ, ದಾವಣಗೆರೆ ಇವರು ಈ ಕಛೇರಿಯ ಕರ್ತವ್ಯಗಳಿಗೆ ದಿನಾಂಕ:16.03.2009 ರಿಂದ07.06.2009 (ಎರಡು ದಿನಗಳು ಸೇರಿ) ಹಾಗೂ ದಿನಾಂಕ:11.06.2009 ರಿಂದ 23.07.2009ರವರೆಗೆ (ಮುಂದುವರೆದಿದೆ) ಅನಧಿಕೃತ ಗೈರು ಹಾಜರಿ ಆಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ–1957ರ ನಿಯಮ 8(VIII)ರ ಹಾಗೂ ಸರ್ಕಾರಿ ಸುತ್ತೋಲೆ ಸಂಖ್ಯೆ: ಸಿಆಸುಇ 18 ಸೇಇವಿ 2001 ದಿನಾಂಕ:14.09.2001ರ ಕ್ರಮ ಸಂಖ್ಯೆ (2)ರ ನಿಯಮದ ವ್ಯಾಪ್ತಿಯಲ್ಲಿ ಕೆಳಗೆ ಸಹಿ ಮಾಡಿದವರಿಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸಿ. ಗಣಾಚಾರಿ 'ಡಿ' ದರ್ಜೆ ನೌಕರರು ಇವರ ಅನಧಿಕೃತ ಗೈರು ಹಾಜರಿ ಸಾಬೀತು ಆಗಿರುವುದರಿಂದ ಡಾ: ಆರ್.ಜಿ. ಗೊಲ್ಲರ್, ಜಂಟಿ ಕೃಷಿ ನಿರ್ದೇಶಕರು, ದಾವಣಗೆರೆ ಆದ ನಾನು ಮೇಲ್ಕಾಣಿಸಿದ ನೌಕರರನ್ನು ದಿನಾಂಕ:31.07.2009ರ ಅಪರಾಹ್ನದಿಂದ ಜಾರಿಗೆ ಬರುವಂತೆ "ಸೇವೆಯಿಂದ ವಜಾ ಮಾಡಿ" ಆದೇಶಿಸಿರುತ್ತೇನೆ.

ಶ್ರೀ ಎಂ.ಸಿ. ಗಣಾಚಾರಿ 'ಡಿ' ದರ್ಜೆ ನೌಕರರು ಇವರು ಸೇವೆಯಿಂದ ವಜಾಗೊಂಡ ಬಗ್ಗೆ ಈ ಕಛೇರಿಯಲ್ಲಿರುವ ನೌಕರರ ಸೇವಾ ಪುಸ್ತಕದಲ್ಲಿ ದಾಖಲಿಸಿ ದೃಢೀಕರಿಸಿರುತ್ತೇನೆ.

**ಡಾ: ಆರ್.ಜಿ. ಗೊಲ್ಲರ್**
ಜಂಟಿ ಕೃಷಿ ನಿರ್ದೇಶಕರು,
ದಾವಣಗೆರೆ.

ಪಿ.ಆರ್.742

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**
**ಸಂಖ್ಯೆ: ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ: 119, 2009**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) ಶ್ರೀಮತಿ ಪಾರ್ವತಿ, ಗಂ:ದಿ: ಕನಕಪ್ಪ ಚಿಟ್ಟನಾಳ.<br>ವಯಸ್ಸು: 26 ವರ್ಷ, ಉ:ಕೂಲಿ,<br>ಸಾ:ನಗಲಾಪುರ, ತಾ: ಲಿಂಗಸೂಗುರ,<br>ಜಿ:ರಾಯಚೂರು, ಹಾಲಿವಸ್ತಿ: ತಳುವಗೇರಾ<br>ತಾ:ಕುಷ್ಟಗಿ, ಜಿ:ಕೊಪ್ಪಳ. | **ವಿರುದ್ಧ** | 1) ಶ್ರೀ ಜಗದೀಶ ಅಲಿಯಾಸ್ ಜಗದೀಶ್ ನಾಯ್ಡು ಅಲಿಯಾಸ್ ಜಗದೀಶ್‌ಕುಮಾರ್ ಪಿ. ತ: ಬುಡ್ಡಪ್ಪ, ವಯ:32 ವರ್ಷ, ಉ:ಕಂಟ್ರಾಕ್ಟರ್, ಮತ್ತು ಮಾಲೀಕರು ಮೆ:ಧೃವ ಅಶೋಸಿಯೇಟ್ಸ್, ನಂ.25/ಎ, ಹೆಚ್.ಎಂ.ಟಿ. ಮೈನ್ ರೋಡ್ ಮತ್ತಿಕೆರೆ, ಪೋ: ಬೆಂಗಳೂರು–54. |

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಕನಕಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:09.03.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ/ ಗಾಯ/ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನಕ್ಕಾಗಿ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಕನಕಪ್ಪ ರಾದ ಶ್ರೀ:ಶ್ರೀಮತಿ ಪಾರ್ವತಿ W/o ಕನಕಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನ ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ/ ಗಾಯ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ

| Sl. No. | Description of the Property & Location, Khata No./ Assessment No./ Survey No. | Boundaries | Description of the Property / House No. / Plot No. and Present Holder of the Property | Approximate value Assessed |
|---|---|---|---|---|
| 2. | Bangalore Mahanagara Palike, Ward No. 41, Old Site No. 51, New Corporation No. 51/1, $19^{th}$ Main Road, $12^{th}$ Cross Road, Gajendra Nagar, Avalahalli, dwelling house Measurement : :15' x 40' Old Sy No. 423/2, Katha No. 43/2 | E :House No. 50,<br>W :House No. 51<br>N : Road<br>S : House No. 36 | K.N.G.R. 6239 /2005 – 06 Dated 04.06.2005 N. Suresh Krishnamurthy aged about 50, S/o Late Sri N. S. Krishnamurthy Reg. 377, $1^{st}$ Floor, $7^{th}$ Cross Road, $2^{nd}$ Main Road, (Near Shanthi Sagar Hotel), Airport Road, Bangalore – 77 | Approximate value per sqft<br>Rs. 4500/- Total Amount<br>Rs. 27,00,000/- |
| 3. | Bangalore Mahanagara Palike, Ward No. 41, Old Site No. 50, New Corporation No. 50, $19^{th}$ Main Road, $12^{th}$ Cross Road, Gajendra Nagar, Avalahalli, dwelling house. Measurement : :30' x 45' 3 floors house. Katha No. 43/2 | E : House No. 49,<br>W : House No. 51<br>N : Road<br>S : House No. 37 | K.N.G.R. 6245 / 2005 – 06 Dated 04.06.2005 N. Suresh Krishnamurthy aged about 50, S/o Late Sri N. S. Krishnamurthy Reg. 377, $1^{st}$ Floor, $7^{th}$ Cross Road, $2^{nd}$ Main Road, (Near Shanthi Sagar Hotel), Airport Road, Bangalore – 77 | Approximate value per sqft<br>Rs. 6000/- Total Amount Rs. 81,00,000/- |
| 4. | Bangalore Mahanagara Palike, Ward No. 41, Old Site No. 55, New Corporation No. 55, $19^{th}$ Main Road, $12^{th}$ Cross Road, Gajendra Nagar, Avlahalli, half built house. Measurement : :30' x 40' Old Sy No. 43/2,<br>Katha No. 43/2 | E :House No. 56,<br>W :House No. 54<br>N : Old Building<br>S : Road | K.N.G.R. 6237 / 2005 – 06 Dated 04.06.2005 N. Suresh Krishnamurthy aged about 50, S/o Late Sri N. S. Krishnamurthy Reg. 377, $1^{st}$ Floor, $7^{th}$ Cross Road, $2^{nd}$ Main Road, (Near Shanthi Sagar Hotel), Airport Road, Bangalore – 77 | Approximate value per sqft Rs. 4500/- Total Amount<br>Rs. 54,00,000/- |
| 5. | H.S.R. Layout, $1^{st}$ Sector, Site No. 28, Measurement : :30' x 40' Katha Certificate No./BDA/AOE/28-H.S.R.1/04-2005. | E : Road<br>W : Site No. 37<br>N : Site No. 29<br>S : Site No. 27 | B.N.G. (U) B.L.R. (S) 20977 / 2005 – 06 Dated 27.03.2006 Smt M. Saraswathamma aged about 78, W/o Sri Makum Sathya Narayan Shetty "Sri Krishna" $4^{th}$ Cross, K.R. Extension, Tumkur. | Approximate value per sqft Rs. 10000/- Total Amount<br>Rs. 1.20 crores |

| Sl. No. | Description of the Property & Location, Khata No./ Assessment No./ Survey No. | Boundaries | Description of the Property / House No. / Plot No. and Present Holder of the Property | Approximate value Assessed |
|---|---|---|---|---|
| 6. | H.S.R. Layout, 6th Sector, Site No. 178/A, Measurement : :60' x 40' Katha Certificate No./BDA/AOE/28-H.S.R.1/04-2005. | E : Site No. 178<br>W : Site No. 179<br>N : Road<br>S : Site No. 183 | B.N.G. (U) B.L.R. (S) 7976 / 2006 – 07 Dated 28.06.2006 Smt S. Savitha, aged about 29, W/o Sri Rajesh No. 910, 4th Cross, B.T.M. 2nd Stage, Bangalore – 76 | Approximate value per sqft Rs. 10000/- Total Amount Rs. 2.40 crores |
| 7. | H.S.R. Layout, 7th Sector, Site No. 1671/A, Measurement : :60' x 40' | E : 80 feet road<br>W : Site No. 1658/A<br>N : Site No. 1672/A<br>S : Site No. 1670/A | B.N.G. (U) B.L.R. (S) 17398 / 2006 – 07 Dated 29.09.2006 Smt Pallavi Om Prakash, aged about 45, W/o Sri Om Prakash, "Jagruthi", No. 4, 'C' Service Road, 14th Cross, 1st Main Road, 5th Block, 6th Sector, H.S.R. Layout, Bangalore - 31 | Approximate value per sqft Rs. 12500/- Total Amount Rs. 3.00 crores |
| 8. | Hosakerehalli Grama Sy No. 101, 103, 104, 105, 106, Viswa Barathi House Building Co Operative Society Ltd. Bangalore Mahanagara Palike, Ward No. 54, 4th Phase, Girinagar, Site No. 1051, Measurement : 30' x 50' | E : Site No. 1050<br>W : Site No. 1052<br>N : Road<br>S : Site No. 1026 | B.N.G. (U) K. N.G.R. (S) 12922 / 2005 – 06 Dated 29.08.2005 Smt D.V. Bhagya Lakshmamma, aged about 51, W/o Sri A.S. Rangegowda, No. 103, 1st Cross, K.S. Colony, R.K. Block, Thyagaraja Nagar, Bangalore – 29 | Approximate value per sqft Rs. 4000/- Total Amount Rs. 60.00 lakhs |

**M. VENKATESHAMURTHY**

Under Secretary to Government,

Revenue Department (LAQ-2).

**ANNEXURE –III**

**SCHEDULE**

**Properties acquired by M/s. Investech & Investech Builders & Developers Pvt. Ltd. from and out of the deposit collected fraudulently from the public**

**District : Bangalore**

**Taluk : Bangalore North**

| Sl. No. | Description of the Property and location, Khatha No. / Survey No. / Site No. | Boundaries | Description of the property - Present Holder of the Property | Approximate Value Assessed per Sqare Feet and Total Value |
|---|---|---|---|---|
| 1. | Bangalore North, Yashavantha Pura Hobli, Herohalli Village, Khatha No. 2419, Survey No. 63, Site No.17, Measurements: Size 45' x 35' | East : By Road<br>West : Site No. 24<br>North : Site No. 10<br>South : Road | B.M. Jayaram 15.09.2006 sold by Sri Ranga on GPA of original owner Smt. Veena Suresh | RS. 1000/-per Sft.<br>Rs.15,75,000/- |
| 2. | Bangalore North, Yashavantha Pura Hobli, Herohalli Village, Khatha No. 2420, Survey No. 63, Site No. 18 Measurements : Size 45' x 35' | East : By Road<br>West : Site No. 23<br>North : Site No. 19<br>South : Site No.17 | B.M. Jayaram 15.09.2006 sold by Sri Ranga on GPA of the original owner Smt. Veena Suresh | Rs. 1000/- per Sft.<br>Rs.15,75,000/- |
| 3. | Bangalore North Taluk, Kasaba Hobli, Dommalur, BBMP, Jeevan Bhima Nagar, Sub Division, Ward No.72. Site No. 3579, Measurements : Size 66' x 40' | East : By Road<br>West :Site No. 3595<br>North :Site No. 3580<br>South:Site No. 3578 | V. Ramesh, S/o Late V. A. Rangaswamy, No. D-1/147, Sathy Marg, Chanikyapuri – 100 021 Khatha No. 2672, 23.12.2005 | Rs. 6000/- per Sft.<br>Rs.1,58,40,000/- |
| 4. | Bangalore North Taluk, Kasaba Hobli, Dommalur, BBMP, Jeevan Bhima Nagar, Sub Division, Ward No.72. Site No. 1083, Measurements : Size 80' x 50' | East : By Road<br>West :Site No. 1084<br>North : By Road<br>South : Site No. 1098 / 1099 | Suresh Krishnamurthy, Smt. Veena Suresh, Ashwini Kumar residing at No. 377, 1st Floor, 5th Cross, Dommalur, Bangalore – 77 Khata No. 4842 on 27.12.2004 | Rs. 15000/- per Sft.<br>Rs.6,00,00, 000/- |

**M. Venkateshmurthy**
Under Secretary to Government,
Revenue Department (LAQ-2).

**ANNEXURE – IV**

**Amount in cash retrieved & deposited by the Investigating Officer**

| Amount pertaining to | Amount in cash retrieved by the I.O. | Where it is deposited | |
|---|---|---|---|
| | | Name of the Bank | A/c No. |
| M/s Investech and Investech Builders and Developers Pvt. Ltd. | Rs. 1,98,62,934-46 | SBM, Lady Curzon Road, Shivaji Nagar, Bangalore (II ACMM Court) | 105077 |
| M/s Darshanika Foundation | Rs.1,67,57,427-00 | SBI-Shivajinagar, Treasury Account | |

**M. Venkateshmurthy**

PR-906

Under Secretary to Government,
Revenue Department (LAQ-2).

**ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಅಧಿಸೂಚನೆ**

**ಸಂಖ್ಯೆ: ಎಂಎಜಿ(2)/ಸಿಆರ್/104/09–10, ದಿನಾಂಕ:9ನೇ ಸೆಪ್ಟೆಂಬರ್, 2009**

**ವಿಷಯ:** ದಾವಣಗೆರೆ ನಗರದ ರೈಲ್ವೆ ನಿಲ್ದಾಣದ ಬಳಿ ಮುಂಗಡ ಪಾವತಿ ಆಟೋ ರಿಕ್ಷಾ ಕೌಂಟರಿನಲ್ಲಿ ಆಟೋರಿಕ್ಷಾಗಳು ಕಡ್ಡಾಯವಾಗಿ ನಿಲ್ಲಲು ಮತ್ತು ರೈಲ್ವೆ ನಿಲ್ದಾಣದ ಹೊರಭಾಗದಲ್ಲಿ ಆಟೋ ರಿಕ್ಷಾ ನಿಲುಗಡೆಯನ್ನು ನಿಷೇಧಿಸುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಾರಿಇ/238ಸಾಇಪ–2007, ದಿನಾಂಕ:29.12.2007.

2) ಜಿಲ್ಲಾ ಪ್ರಾದೇಶಿಕ ಸಾರಿಗೆ ಪ್ರಾಧಿಕಾರದ ಆದೇಶ ದಿನಾಂಕ:11.04.2008.

3) ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದಾವಣಗೆರೆ ಇವರ ಪತ್ರ ಸಂಖ್ಯೆ:ಪ್ರಾಸಾಅ/ದಾವ/ಮುಂಗಡ ಪಾವತಿ.ಆಟೋ ಕೌಂಟರ್ ಪಿ.ಆರ್/222/708, ದಿನಾಂಕ:06.06.2009.

4) ರೈಲ್ವೆ ಪೊಲೀಸ್ ಠಾಣೆ ದಾವಣಗೆರೆ ಇವರ ಪತ್ರ ದಿನಾಂಕ:29.05.2009.

5) ಜಿಲ್ಲಾ ಪೋಲೀಸ್ ಅಧೀಕ್ಷಕರು, ದಾವಣಗೆರೆ ಇವರ ಪತ್ರ ಸಂಖ್ಯೆ: ಸಿಬಿ/1/245/2009, ದಿನಾಂಕ:06.07.2009.

6) ಈ ಕಛೇರಿ ಸಮ ಸಂಖ್ಯೆ ಪತ್ರ ದಿನಾಂಕ:23.07.2009.

ಉಲ್ಲೇಖ (1)ರಲ್ಲಿನ ಸರ್ಕಾರದ ಅಧಿಸೂಚನೆಯ ಕೇಂದ್ರ ಮೋಟಾರ್ ವಾಹನಗಳ ಕಾಯ್ದೆ 1988ರ ಕಲಂ 67ರ ಉಪಕಲಂ(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರ್ವಜನಿಕ ಪ್ರಮಾಣಿಕರ ಹಿತದೃಷ್ಟಿಯಿಂದ ದಾವಣಗೆರೆ ರೈಲ್ವೆ ನಿಲ್ದಾಣದಲ್ಲಿ ಮುಂಗಡ ಪಾವತಿ ಆಟೋ ರಿಕ್ಷಾ ಕೌಂಟರ್ ತೆರೆಯಲು ಅನುಮೋದನೆ ನೀಡಿರುತ್ತದೆ. ಹಾಗೂ ಪ್ರಯಾಣ ದರಗಳನ್ನು ಅಂದರೆ ದಾವಣಗೆರೆ ನಗರದ ರೈಲ್ವೆ ನಿಲ್ದಾಣದಿಂದ ನಗರದ ವಿವಿಧ ಬಡಾವಣೆಗಳಿಗೆ ಹೊರಡುವ ಸಾರ್ವಜನಿಕ ಪ್ರಯಾಣಿಕರಿಗೆ ಸಾರಿಗೆ ಸೌಕರ್ಯ ಒದಗಿಸುವ ಆಟೋರಿಕ್ಷಾಗಳಿಗೆ ಮುಂಗಡ ಪಾವತಿ ಪ್ರಯಾಣ ದರಗಳನ್ನು ನಿಗದಿಪಡಿಸಲು ದಾವಣಗೆರೆ ಪ್ರಾದೇಶಿಕ ಸಾರಿಗೆ ಪ್ರಾಧಿಕಾರಕ್ಕೆ ನಿರ್ದೇಶನ ನೀಡಿದ್ದರ ಮೇರೆಗೆ ಜಿಲ್ಲಾಡಳಿತದ ವತಿಯಿಂದ ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಸಭೆ ದಿನಾಂಕ:11.04.2008ರಲ್ಲಿ ಕೈಗೊಂಡ ನಿರ್ಣಯದನ್ವಯ ನಗರದ ಅಂಗವಿಕಲರ ವ್ಯಕ್ತಿಯೋರ್ವನಿಗೆ ಸದರಿ ಪ್ರೀಪೈಡ್ (ಮುಂಗಡ ಪಾವತಿ) ಆಟೋ ಕೌಂಟರ್ ತೆರೆದು ಕರ್ತವ್ಯ ನಿರ್ವಹಿಸುವಂತೆ ಆದೇಶಿಸಲಾಯಿತು.

ಅದರಂತೆ ರೈಲ್ವೆ ಇಲಾಖೆಯವರು ಸ್ಥಾಪಿಸಿಕೊಟ್ಟ ಕೌಂಟರಿನಲ್ಲಿ ದಿನಾಂಕ:27.10.2008 ರಿಂದ ಸದರಿ ವ್ಯಕ್ತಿ ಕರ್ತವ್ಯ ನಿರ್ವಹಿಸತೊಡಗಿದ್ದಾರೆ. ಆದರೆ ಆಟೋ ರಿಕ್ಷಾಗಳು ಸದರಿ ಕೌಂಟರಿಗೆ ಬರದೇ ನಿಲ್ದಾಣದ ಹೊರಭಾಗದಿಂದ ಪ್ರಯಾಣಿಕರನ್ನು ಹತ್ತಿಸಿಕೊಂಡು ಹೋಗುತ್ತಿರುವುದರಿಂದ ಕೌಂಟರ್ ನಿರ್ವಹಣೆ ಮಾಡಲು ಸಾಧ್ಯವಾಗುತ್ತಿಲ್ಲವೆಂದು ಆಟೋ ರಿಕ್ಷಾಗಳು ಸದರಿ ಕೌಂಟರಿಗೆ ಸರದಿ ಪ್ರಕಾರ ಬಂದು ನಿಂತುಕೊಳ್ಳುವಂತೆ ಕ್ರಮ ಜರುಗಿಸಲು ಕೋರಿ ದಿನಾಂಕ:30.10.2008 ರ ಪತ್ರದಲ್ಲಿ ಕೋರಿದ್ದರ ಮೇರೆಗೆ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಮತ್ತು ಜಿಲ್ಲಾ ರಕ್ಷಣಾಧಿಕಾರಿಗಳು ಪರಸ್ಪರ ಸಮಾಲೋಚನೆ ನಡೆಸಿ, ರೈಲ್ವೆ ನಿಲ್ದಾಣದ ಹೊರಭಾಗದಲ್ಲಿ ಆಟೋ ರಿಕ್ಷಾಗಳ ನಿಲುಗಡೆಯನ್ನು ಕಡ್ಡಾಯವಾಗಿ ನಿರ್ಬಂಧಿಸಿ, ಪ್ರತಿಬಂಧಕಾಜ್ಞೆಯನ್ನು ಹೊರಡಿಸಿದರೆ ಮಾತ್ರ ಆಟೋ ರಿಕ್ಷಾಗಳು ಮುಂಗಡ ಪಾವತಿ ಕೌಂಟರ್‌ನಲ್ಲಿ ಸರದಿ ಪ್ರಕಾರ ನಿಲುಗಡೆಯಾಗಲು ಅವಕಾಶವಾಗುತ್ತದೆ ಎಂಬುದಾಗಿ ವರದಿ ನೀಡಿರುತ್ತಾರೆ.

ಮೇಲ್ಕಂಡ ಕಾರಣಕ್ಕಾಗಿ ಕೆ. ಅಮರನಾರಾಯಣ ಭಾ.ಆ.ಸೇ. ಜಿಲ್ಲಾಧಿಕಾರಿ ಮತ್ತು ಜಿಲ್ಲಾ ದಂಡಾಧಿಕಾರಿ ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರಾದೇಶಿಕ ಸಾರಿಗೆ ಪ್ರಾಧಿಕಾರ ಮತ್ತು ಜಿಲ್ಲಾ ರಸ್ತೆ ಸುರಕ್ಷಿತಾ ಸಮಿತಿ. ಆದ ನಾನು ಕೇಂದ್ರ ಮೋಟಾರ್ ವಾಹನಗಳ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಮೋಟಾರ್ ವಾಹನಗಳ ನಿಯಮಾವಳಿಗಳು 1989ರ ನಿಯಮ 221(ಎ)(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಾವಣಗೆರೆ ರೈಲ್ವೆ ನಿಲ್ದಾಣದ ಆವರಣದ ಹೊರಗಡೆ ಅಂದರೆ ಉಪವಿಭಾಗಾಧಿಕಾರಿಗಳ ಕಛೇರಿ ಮೂಲೆಯಿಂದ ಪೂರ್ವಾಭಿಮುಖವಾಗಿರುವ ರೈಲ್ವೆ ಅಂಡರ್ ಬ್ರಿಡ್ಜ್ ರಸ್ತೆಯವರೆಗೆ ಆಟೋ ರಿಕ್ಷಾಗಳು ಪ್ರಯಾಣಿಕರನ್ನು ಹತ್ತಿಸಿಕೊಳ್ಳುವುದನ್ನು/ಇಳಿಸುವುದನ್ನು ನಿಷೇಧಿಸಿದ್ದೇನೆ. ಬದಲಿಗೆ ರೈಲ್ವೆ ನಿಲ್ದಾಣದ ಆವರಣದಲ್ಲಿರುವ ಮುಂಗಡ ಪಾವತಿ ಆಟೋ ರಿಕ್ಷಾ ಕೌಂಟರಿನಲ್ಲಿ ಸರತಿ ಸಾಲಿನಲ್ಲಿ ನಿಲ್ಲಿಸಿಕೊಂಡು ಪ್ರಯಾಣಿಕರನ್ನು ಹತ್ತಿಸಿಕೊಂಡು ಹೋಗಬೇಕೆಂದು ಆದೇಶಿಸಿದೆ.

ಈ ಆದೇಶವನ್ನು ಉಲ್ಲಂಘಿಸುವ ಆಟೋರಿಕ್ಷಾ ಚಾಲಕರ ವಿರುದ್ಧ ಕರ್ನಾಟಕ ಸರ್ಕಾರದ ಸಾರಿಗೆ ಸಚಿವಾಲಯದ ಅಧಿಸೂಚನೆ ಸಂಖ್ಯೆ: ಸಾರಿಇ/309ಸಾಇಪ೦6, ದಿನಾಂಕ:29.09.2007 ರನ್ವಯ ರೂ.1000/–ಗಳ ದಂಡ ವಿಧಿಸಬೇಕೆಂದು ನಗರ ಸಂಚಾರ ಪೊಲೀಸ್ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಆದೇಶಿಸಿದೆ. ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನದಿಂದ ಜಾರಿಗೆ ಬರುತ್ತದೆ ಮತ್ತು ಆ ದಿನದಂದು ಸಂಚಾರಿ ಪೊಲೀಸ್ ಠಾಣೆಯವರು ಸದರಿ ಸ್ಥಳದಲ್ಲಿ ಅಧಿಸೂಚನೆಯ ಪ್ರಕಟಣಾ ಫಲಕವನ್ನು ನಿಲ್ಲಿಸುವುದು.

**ಕೆ. ಅಮರನಾರಾಯಣ**

ಪಿ.ಆರ್.928

ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ದಂಡಾಧಿಕಾರಿ,
ದಾವಣಗೆರೆ ಜಿಲ್ಲೆ, ದಾವಣಗೆರೆ.

## ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ

**ಸಂಖ್ಯೆ: ಡಿಟಿಸಿಆರ್/434/2008–09, ದಿನಾಂಕ:9ನೇ ಜುಲೈ, 2009**

**ಉಪಸ್ಥಿತರು**: ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ತಿ.ನರಸೀಪುರ ಪೊಲೀಸ್ ಠಾಣೆ, ತಿ.ನರಸೀಪುರ ತಾಲ್ಲೂಕು. | | ಪುಟ್ಟಸ್ವಾಮಿ ಬಿನ್ ಮರಿಮಾದಯ್ಯ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:28.12.2008 ರಂದು ಬೆಳಿಗ್ಗೆ 10:15 ಗಂಟೆಯ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ತಿ.ನರಸೀಪುರ ಪೊಲೀಸ್ ಠಾಣೆ, ಇವರು ತಿ.ನರಸೀಪುರ ಟೌನ್, ಲಿಂಗ ರಸ್ತೆ, ಶ್ರೀರಾಮ ಸೈಕಲ್ ಷಾಪಾ ಮುಂಭಾಗದಲ್ಲಿ ಕೆಎ–17/ಇ–7413 ನೋಂದಣಿ ಸಂಖ್ಯೆಯ ಟಿವಿಎಸ್ ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 5.600 ಲೀ. ವಿವಿಧ ಮಾದರಿಯ ಮದ್ಯ ಹಾಗೂ 1.650 ಲೀ. ಬಿಯರ್‌ನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತು ಮಾಡಿ, ಮೊಕದ್ದಮೆ ಸಂಖ್ಯೆ: 288/2008 ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ಪ್ರಕಾರ ಶಿಕ್ಷಾರ್ಹವಾದ್ದರಿಂದ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿ, ಈ ಪ್ರಕರಣದಲ್ಲಿ ಜಪ್ತಾದ ವಸ್ತುಗಳನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ: 10.02.2009 ರಂದು ಕೋರಿರುತ್ತಾರೆ. ಅಂತೆಯೇ ದಿನಾಂಕ:11.02.2009 ರಂದು ತಿ.ನರಸೀಪುರ ವಲಯ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿದೆ.

ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಗಾಗಿ ದಾವಣಗೆರೆ ಜಿಲ್ಲೆಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಈ ಪ್ರಾಧಿಕಾರದಿಂದ ದಿನಾಂಕ:16.03.2009 ರಂದು ಪತ್ರ ಬರೆಯಲಾಗಿದ್ದು, ಇದಕ್ಕೆ ಯಾವುದೇ ಪ್ರತಿಕ್ರಿಯೆ ಇರುವುದಿಲ್ಲ. ಸದರಿ ವಾಹನಕ್ಕೆ ಸಂಬಂಧಪಟ್ಟ ಆರೋಪಿಗಳಾಗಲೀ/ವಾಹನ ಮಾಲೀಕರಾಗಲೀ ವಾಹನ ಬಿಡುಗಡೆಗಾಗಿ ಇದುವರೆವಿಗೂ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕ ಅಬಕಾರಿ ಕಾಯಿದೆ ಕಲಂ 32, 34ರ ಅಡಿಯಲ್ಲಿ ಪತ್ತೆ ಹಚ್ಚುವ ಅಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಗಳು ತಮ್ಮ ಮೇಲೆ ಇರತಕ್ಕಂತ ಜವಾಬ್ದಾರಿ / ಹೊಣೆಗಾರಿಕೆಯನ್ನು ಇದುವರೆವಿಗೂ ಪ್ರಾಧಿಕಾರದ ಮುಂದೆ ಹಾಜರಾಗಿ ಸ್ಪಷ್ಟವಾಗಿ ನಿರೂಪಿಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (6) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ

ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೆ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೆ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/434/2008-09, ದಿನಾಂಕ:9ನೇ ಜುಲೈ, 2009**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) (2) ರಡಿಯಲ್ಲಿ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ತಿ.ನರಸೀಪುರ ಪೊಲೀಸ್ ಠಾಣೆ, ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:288/2008, ದಿನಾಂಕ:28.12.2008 ರಂದು ವಶಪಡಿಸಿಕೊಂಡ ಕೆಎ-17/ಇ-7413 ನೋಂದಣಿ ಸಂಖ್ಯೆ ಟಿವಿಎಸ್ ಮೊಪೆಡ್ ವಾಹನವನ್ನು (ಈ ಪ್ರಕರಣದಲ್ಲಿ ಜಪ್ತಾದ ಮಾದಕ ದ್ರವ್ಯಗಳನ್ನು ಪ್ರತ್ಯೇಕ ಆದೇಶದಲ್ಲಿ ಮುಟ್ಟುಗೋಲು ಹಾಕಿ ಕೊಂಡು ಆದೇಶ ಹೊರಡಿಸಲಾಗಿದೆ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2009ನೇ ಇಸವಿ ಜುಲೈ ತಿಂಗಳ 9ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತಾ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಗೆ ಬರುವುದು.

**ಡಾ॥ ವೈ. ಮಂಜುನಾಥ್**
ಡೆಪ್ಯೂಟಿ ಕಮೀಷನರ್ ಎಕ್ಸೈಸ್
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿ.ಆರ್.951

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ/ಕಾನಪ/ಎಫ್-72/2009/453, ದಿನಾಂಕ:14ನೇ ಸೆಪ್ಟೆಂಬರ್, 2009**

| **ಅರ್ಜಿದಾರರು:** | **ಪ್ರತಿವಾದಿಗಳು:** |
|---|---|
| ಜಯನಗೌಡ @ ಚಾಮಮನಗೌಡ, ಸಿದ್ದನಗೌಡ ಜಯನಗೌಡರ, ಸಾ॥ ಡೋಣಿ ತಾ: ಮುಂಡರಗಿ ಜಿ: ಗದಗ. | 1) ಲಕ್ಷ್ಮೀಕಾಂತ ಪಿ. ನಾಯಕ, R/o. H.No.EWS, 51 ಹೌಸಿಂಗ್ ಬೋರ್ಡ್, ವಿದ್ಯಾನಗರ, ಮಾರ್ಗೊ, ಗೋವಾ.<br>2) ಡಿವಿಜನಲ್ ಮ್ಯಾನೇಜರ್, ನ್ಯೂ ಇಂಡಿಯಾ ಅಶೂರೆನ್ಸ್ ಕಂ.ಲಿ., ಹುಬ್ಬಳ್ಳಿ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀ ಜಯನಗೌಡ @ ಚಾಮಮನಗೌಡ ಸಿದ್ದನಗೌಡ, ಜಯನಗೌಡರ ಸಾ:ಡೋಣಿ, ತಾ: ಮುಂಡರಗಿ ಜಿ:ಗದಗ ಇವರು ತಾವು ಮೃತ ತೋಟನಗೌಡ ಚಾ. ಜಯನಗೌಡರ ಇವರ ತಂದೆ ಎಂದೂ, ಅವರ ಮರಣದಿಂದ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತೋಟನಗೌಡ ಚಾ. ಜಯನಗೌಡರ ಇವರು ಒಂದನೇ ಪ್ರತಿವಾದಿಗಳಾದ ಲಕ್ಷ್ಮೀಕಾಂತ ಡಿ. ನಾಯಕ, ಹೌಸಿಂಗ್ ಬೋರ್ಡ್, ವಿದ್ಯಾನಗರ, ಗೋವಾ ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ ಜಿಲ್ಲೆ, ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್.927

**REVENUE DEPARTMENT**

**PROPERTY ATTACHMENT NOTIFICATION**

**No.RD 52 AQB 2009(i), Bangalore, Dated:16th September, 2009**

Whereas it has come to the notice of the Government that the Financial Establishment viz; M/s.Darshanika Foundation, Bangalore is involved in the fraudulent transactions,

Whereas, it has come to the notice of the Government that the above mentioned Financial Establishment has failed to return the deposits after maturity or on demand by the depositors and to pay interest or other assured benefits or to provide the service against such deposits,

Whereas it has further come to the notice of the Government that the Board of Directors and other persons connected with the above mentioned Financial Establishment has acquired the landed and other immovable properties from and out of the deposits collected from the depositors,

Wherefore, it is expedient that the above mentioned Financial Establishment has acted detrimental to the interest of the depositors with an intention to defraud them and it has become necessary to protect the interest of the depositors of aforesaid financial establishment,

Now therefore Government in exercise of the powers conferred under Sub-section (2) of Section (3) of the Karnataka Protection of interest of Depositors in financial establishments Act, 2004 attach the money and the properties belonging to M/s. Darshanika Foundation, Bangalore shown in the Annexure-I and II respectively,

Hence, all these properties and monies acquired by M/s. Darshanika Foundation, Bangalore have been attached and is declared that said monies and properties shall on publication of this order in the official gazette, shall forthwith, vest with the Competent Authority, who has been appointed by the Government, pending further orders from the special Court.

The earlier Notifications issued in this regard are hereby withdrawn.

By Order and in the name of the Governor of Karnataka,

**M. VENKATESHAMURTHY**

Under Secretary to Government,

Revenue Department (LAQ-2).

**ANNEXURE-I**

**Properties acquired by M/s. Darshanika Foundation from and out of the deposit collected fraudulently from the public**

**SCHEDULE-I**

| **District** | **Taluk:** | **Hobli:** | **Village:** |
|---|---|---|---|
| Bangalore | Bangalore South Taluk | Tavarekare | Chunchunakupee |

| Sl. No. | Sy. No. Extent | East | West | North | South | Approximate Value |
|---|---|---|---|---|---|---|
| 1. | Sy.No. 61 3 A - 25 G | Land of Siddanna & Mallaiah | Land of Basha | 3 Acres 25 Guntas of sold to Rajagopal | Remaining portion sold to Adinarayana Murthy | Rs. 3,62,50,000 |
| 2. | Sy.No. 61 3 A - 25 G | Land of Siddanna & Mallaiah | Land of Basha | Land of Shivanna | Remaining portion sold to Adinarayana Murthy, Rajagopal | Rs. 3,62,50,000 |

| Sl. No. | Sy. No. Extent | East | West | North | South | Approximate Value |
|---|---|---|---|---|---|---|
| 3. | Sy.No. 61<br>3 A - 23 G | Land of Siddanna & Mallaiah | Land of Basha | 3 Acres 25 Guntas of lands sold to Rajagopal | Land of Panchaksha raiah | Rs. 3,57,50,000 |
| 4. | Sy.No. 61/1<br>1 A - 19 G | Land of Puttalingaiah | Government Road | Land of Puttalingaian | Property of Kalappa | Rs. 3.47.50,000 |
| 5. | Sy.No. 64<br>3 A - 20 G | Government Road | Property of Renukappa | Property of Manni Ujayanna | Property of Revamma | Rs. 3,00,50,000 |
| 6. | Sy.No. 64<br>2A - | Property of Virupakshaiah | Sy.No. 64 Private Property | Property of Madival Hanumantha raya | Property of Lakshmibai | Rs. 2,00,00,000 |
| 7. | Sy.No. 65/1 Re Sy.No. 65/1 A 25G | Property of Palakshaiah | Property of Rudreshaiah | Property of Rudreshaiah | Property of Lingaiah & Veerashettappa | Rs. 62,50,000 |
| 8. | Sy. No. 55/2 Re<br>Sy No. 65/2 C 2A 19G | Property of Palakshaiah | Property of Bhadraiah | Property of Somashekar aiah | Property of Gangamma | Rs. 2,47,50,000 |
| 9. | Sy.No. 65/2 Re<br>Sy.No. 65/2 C 2A | Property of Basavarajappa | Property of Bhadraiah | Property of Sarvamangala | Property of Rudreshaiah | Rs. 2,00,00,000 |

**M. VENKATESHAMURTHY**
Under Secretary to Government,
Revenue Department (LAQ-2).

**Property -2**

**Commercial Complex Belongs to**

**No. 61-64 East end Road, R.V. Road, Basavanagudi, Bangalore - 560 004**

**SCHEDULE-2**

| Sl. No. | East | West | North | South | approximate Value |
|---|---|---|---|---|---|
| 1. | Road | Conservancy Road | House belongs to Ramaswamappa | House belongs to Ramaswamappa | 45,00,000<br>Area 1150 Sq feet |

**M. VENKATESHAMURTHY**
Under Secretary to Government,
Revenue Department (LAQ-2).

**ANNEXURE – II**

**Amount in cash retrieved & deposited by the Investigating officer**

| Amount pertaining to | Amount in cash retrieved by the I.O. | Where it is deposited | |
|---|---|---|---|
| | | Name of the Bank | A/c No. |
| M/s Darshanika Foundation | Rs.1,67,57,427-00 | SBI-Shivajinagar, Treasury Account | - |

**M. Venkateshmurthy**
Under Secretary to Government,
Revenue Department (LAQ-2).

PR-965

**ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೋಲಾರ ಜಿಲ್ಲೆ, ಕೋಲಾರ**

**ಪ್ರಕಟಣೆ**

**ಸಂಖ್ಯೆ: ಜಿಸಕಅ:ಯೋಜನೆ:ಸಿಆರ್–12:2009–10, ದಿನಾಂಕ:25ನೇ ಜುಲೈ, 2009**

**ವಿಷಯ:** 2009–10ನೇ ಸಾಲಿಗೆ ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರಿ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್‌ಇಡಬ್ಲ್ಯೂ89, ದಿನಾಂಕ:02.11.1990.

2009–10ನೇ ಸಾಲಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ವಕೀಲ ತರಬೇತಿಗಾಗಿ ಪರಿಶಿಷ್ಟ ಜಾತಿ: ವರ್ಗದ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ನಿಬಂಧನೆಗಳು**

1) ಎಲ್.ಎಲ್.ಬಿ. ಪರೀಕ್ಷೆಯಲ್ಲಿ ಪಾಸು ಮಾಡಿದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭ್ಯರ್ಥಿಗಳು ಪ್ರಯೋಜನೆ ಪಡೆಯಲು ಅರ್ಹರಾಗಿರುತ್ತಾರೆ. ಕಾನೂನು ಪದವಿಯಲ್ಲಿ ಉತ್ತೀರ್ಣರಾಗಿ ಎರಡು ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳನ್ನು ಸರ್ಕಾರಿ ನಿಯಮಗಳ ಪ್ರಕಾರ ಜಿಲ್ಲಾ ಆಯ್ಕೆಯ ಸಮಿತಿಯ ಸಂದರ್ಶನಕ್ಕೆ ಕರೆದು ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು.

3) ತರಬೇತಿ ಅವಧಿ ನಾಲ್ಕು ವರ್ಷವಿದ್ದು, ತರಬೇತಿ ಅವಧಿಯಲ್ಲಿ ರೂ.1000/–ಗಳ ಮಾಸಿಕ ಶಿಷ್ಯವೇತನ ನೀಡಲಾಗುವುದು.

4) ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಕ್ಕೂ ಹೆಚ್ಚು ವಕೀಲ ವೃತ್ತಿಯಲ್ಲಿ ಅನುಭವ ಇದ್ದವರ ಹತ್ತಿರ ತರಬೇತಿಗಾಗಿ ನಿಯೋಜಿಸಲಾಗುವುದು.

5) ಅಭ್ಯರ್ಥಿಗಳ ವಯೋಮಿತಿ 35 ವರ್ಷಕ್ಕೆ ಮೀರಿರಬಾರದು (ಅರ್ಜಿ ಸಲ್ಲಿಸಿದ ಕಡೆಯ ದಿನಾಂಕದೊಳಗೆ ಇರಬೇಕು)

6) ತರಬೇತಿ ಸೌಲಭ್ಯವನ್ನು ಪಡೆಯಲು ಇಚ್ಛಿಸುವ ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರುಗಳನ್ನು ನೋಂದಾಯಿಸಬೇಕು. ಒಂದು ವೇಳೆ ಅವರುಗಳು ತಮ್ಮ ಹೆಸರುಗಳನ್ನು ನೋಂದಾಯಿಸದಿದ್ದರೆ, ತರಬೇತಿ ಭತ್ಯೆಯನ್ನು ನೋಂದಣಿ ಮಾಡಿಸಿದ ನಂತರ ಪಾವತಿ ಮಾಡಲಾಗುವುದು.

7) ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಯ ತರಬೇತಿ ಮುಗಿಯುವವರೆವಿಗೂ ಅಂದರೆ ನಾಲ್ಕು ವರ್ಷದವರೆವಿಗೂ ತರಬೇತಿಯನ್ನು ಬಿಡುವುದಿಲ್ಲವೆಂದು ಕರಾರು ಪತ್ರ ಬರೆದುಕೊಡಬೇಕಾಗುವುದು. ಒಂದು ವೇಳೆ ಬಿಟ್ಟಲ್ಲಿ ಅಲ್ಲಿಯವರೆಗೆ ಪಡೆದ ಶಿಷ್ಯವೇತನವನ್ನು ಸರ್ಕಾರಕ್ಕೆ ವಾಪಸ್ಸು ಮಾಡಬೇಕಾಗುತ್ತದೆ. ಈ ಹಣವನ್ನು ಶೇ.10ರಷ್ಟು ಬಡ್ಡಿ ಸೇರಿಸಿ ಕಂದಾಯ ಬಾಕಿ ರೂಪದಲ್ಲಿ ವಸೂಲಿ ಮಾಡಲಾಗುವುದು ಒಂದು ವೇಳೆ ರಾಜ್ಯ: ಕೇಂದ್ರ ಸರ್ಕಾರಿ ಕೆಲಸ ಸಿಕ್ಕಿಲ್ಲ ಮಾತ್ರ ನಿಯಮ ಸಡಿಲಗೊಳಿಸಲಾಗುವುದು.

8) ಅಪೂರ್ಣವಾದ ಮತ್ತು ನಿಬಂಧನೆಗಳಿಗೆ ಒಳಪಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

9) ಅಭ್ಯರ್ಥಿಗಳು ಸುಳ್ಳು ಪ್ರಮಾಣ ಪತ್ರಗಳನ್ನು ಮತ್ತು ಮಾಹಿತಿಯನ್ನು ನೀಡಿದಲ್ಲಿ ಅಂತಹ ಅಭ್ಯರ್ಥಿಗಳನ್ನು ಕಾನೂನಿನ ಕ್ರಮಕ್ಕೆ ಒಳಪಡಿಸಲಾಗುವುದು.

ಮೇಲ್ಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ನಮೂನೆಗಳನ್ನು ಕಛೇರಿ ವೇಳೆಯಲ್ಲಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಕೋಲಾರ ರವರಿಂದ ಈ ಪ್ರಕಟಣೆಯ ಕರ್ನಾಟಕ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಒಂದು ತಿಂಗಳವರೆಗೆ ಪಡೆಯಬಹುದು ಪೂರ್ಣ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಈ ಪ್ರಕಟಣೆಯ ರಾಜ್ಯ ಗೆಜೆಟ್‌ನಲ್ಲಿ ಪ್ರಕಟಣೆಗೊಂಡ ದಿನಾಂಕದಿಂದ ಒಂದು ತಿಂಗಳವರೆಗೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಲ್ಲಿ ನೀಡಬಹುದಾಗಿರುತ್ತದೆ. ನಿಗದಿತ ದಿನಾಂಕ ಮೀರಿದ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಅರ್ಜಿಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಕೋಲಾರ ರವರಿಗೆ ಕಳುಹಿಸಿಕೊಡುವುದು ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ
ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಕೋಲಾರ.

ಪಿ.ಆರ್.958

**PROCEEDINGS OF THE COMMISSIONER OF COMMERCIAL TAXES (KARNATAKA), BANGALORE**

**Present:** Sri Pradeep Singh Kharola, IAS,
Commissioner of Commercial Taxes.

**Sub:** KVAT Act, 2003-Section 59(4) – Issue of clarification on eligibility of input tax deduction in respect of fertilizers and chemicals-reg.

**Read:** Application filed by M/s. Diwan Bahadur S.L.Mathias & Sons, Chikmagalure, Dated:31.07.2009.

**Preamble:**

The application M/s. Diwan Bahadur S.L.Mathias & Sons, Post Box No.31, Indira Gandhi Road, Chikmagalur-577 101 is a partnership firm owning a tea estate, engaged in cultivation of tea plants and harvesting of green tea leaves and manufacturing tea in its tea factory. It is a dealer registered under the KVAT Act with TIN 29760004638. It has made an application under Section 59(4) of the KVAT Act, 2003 vide its letter Dated:31.07.2009, explaining the nature of its activities and requesting for issuing clarification that it is entitled to claim input tax deduction from 01.04.2005 onwards on purchase of chemicals and fertilizers used for growing tea leaves which are thereafter used in the manufacture of tea meant for sale. The applicant was also personally heard in the matter on 10.09.2009. In its application Dated:31.07.2009 and at the time of hearing, the petitioner has argued that

(a) There are no restrictions under the KVAT Act which does no enable the applicant to claim tax deduction on purchase of chemicals and fertilizers;

(b) Cultivation of tea crop and processing green tea leaves into commercial product 'tea' is an integrated process which is an agro industry;

(c) As such the applicant is eligible for input tax deduction in respect of fertilizers and chemicals purchased locally by it for use in the cultivation and raising of tea crop out of the output tax payable on the sale of manufactured tea; and

(d) For the above reasons, the applicant seeks clarification from the Commissioner of Commercial Taxes accordingly.

2. Matter is examined. It is seen that growing tea crop is an agricultural activity. It falls under the definition of 'agriculture' as per Section 2(1) of the KVAT Act. As per Section 10(2) of the Act, input tax means tax payable on goods purchased for use in the course of business. Fertilizers and chemicals are not purchased for use in the course of business but for use in agriculture. The tax paid on these goods is therefore not input tax as defined under Section 10(2) of the Act and hence no deduction in this regard may be allowed to the petitioner out of the output tax payable by it.

3. Similar issue under the CST Act came up for consideration before the Hon'ble Supreme Court of India in the case of Travancore Tea Estates Co.Ltd Vs State of Kerala, reported in 39 STC 1. The Supreme Court held that fertilizers and chemicals used in cultivation and growth of tea plants and leaves cannot be comprehended in the expression 'in the manufacture or processing of goods for sale'. Cultivation and growth of tea are in the very nature of things prior to the manufacturing process and do not answer to the description of manufacture and processing of tea meant for sale. What is needed for being used purely in an agricultural operation cannot be said to be goods required for use in a manufacturing process.

4. It is further seen that Section 59(4) of the KVAT Act, 2003 empowers the Commissioner of Commercial Taxes to clarify the rate of tax payable under the Act in respect of goods liable to tax under the Act. It does not empower the Commissioner to clarify the exigibility of a transaction to tax. The

clarification sought by the applicant is not on rate of tax on a particular commodity but on a transaction. The request of the applicant is therefore does not fall within the ambit of Section 59(4) of the KVAT Act.

5. In view of the above facts, the request of the applicant for clarification cannot be considered. Accordingly, the following order is passed:

**Order No.CLR.CR.83/2009-10, Dated:17th September, 2009**

The request of the applicant for issue of clarification that it is entitled to claim input tax deduction on purchase of chemicals and fertilizers used for growing tea crop out of the output tax payable on sale of manufactured tea is rejected.

**PRADEEP SINGH KHAROLA**
Commissioner of Commercial Taxes,
(Karnataka), Bangalore.

PR-961

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಉಪವಿಭಾಗ–1, ಬೆಂದೂರ್‌ವೆಲ್, ಕಂಕನಾಡಿ, ಮಂಗಳೂರು–ಇವರ ನ್ಯಾಯಾಲಯ**

**ಸಂಖ್ಯೆ:ಡಬ್ಲ್ಯೂಸಿಎ/ಸಿಆರ್–23/09ಎಫ್ ದಿನಾಂಕ:19ನೇ ಸೆಪ್ಟೆಂಬರ್, 2009**

| **ಅರ್ಜಿದಾರರು** | | **ಪ್ರತಿವಾದಿಗಳು** |
|---|---|---|
| 1) ಶ್ರೀ ಲ್ಯಾನ್ಸಿ ಮೊಂತೆರೊ, ವರ್ಷ 52, S/o ಲೇಟ್ ಜಕೋಬ್ ಮೊಂತೆರೊ, 2) ಶ್ರೀಮತಿ ಇಸ್ತೆಷನ್ ಡಿ'ಸೋಜ, ವರ್ಷ:48, W/o ಲ್ಯಾನ್ಸಿ ಮೊಂತೆರೊ. ವಾಸ: ಕೂಳೂರು ಬಳಿ ಹೌಸ್, ಪಡುಕೋಡಿ ವಿಲೇಜ್, ಮಂಗಳೂರು ತಾಲ್ಲೂಕು. | ವಿರುದ್ಧ | 1) ಶ್ರೀ ಜೆಸ್ಸಾರ್ ಹೋಗಾರ್ಡ್ ಮೇನೇಜಿಂಗ್ ಡೈರೆಕ್ಟರ್ ಮೆ: ಸರೀನ ಸ್ಟೆ, ಮೌಂಟ್ ಪ್ಲೆಸೆಂಟ್, ಎಸ್.ಎಲ್. ಮೆಥಾಯೆನ್ಸ ರೋಡ್, ಹೈಲ್ಯಾಂಡ್, ಮಂಗಳೂರು–2. 2) ಶ್ರೀಮತಿ ಸಬ್ರೀನ ಪ್ಲೋರಾ ಬ್ರಿಟ್ಟೊ ಹೋಗಾರ್ಡ್ ಆಪರೇಶನ್ಸ್ ಡೈರೆಕ್ಟರ್, ಮೆ: ಸರೀನ ಸ್ಟೆ ಮೌಂಟ್ ಪ್ಲೆಸೆಂಟ್, ಎಸ್.ಎಲ್. ಮೆಥಾಯೆನ್ಸ ರೋಡ್, ಹೈಲ್ಯಾಂಡ್, ಮಂಗಳೂರು–2. |

**ಅಧಿಸೂಚನೆ**

ಅರ್ಜಿದಾರನಾದ/ ಅರ್ಜಿದಾರಳಾದ ಶ್ರೀಮತಿ/ಶ್ರೀ ಲ್ಯಾನ್ಸಿ ಮೊಂತೆರೊ, S/o ಲೇಟ್ ಜಕೋಬ್ ಮೊಂತೆರೊ ಇವರು ತಮ್ಮ ಮಗಳಾದ ಶ್ರೀ/ಕುಮಾರಿ ಮರಿಯ ಜ್ಯೋತಿ ಮೊಂತೆರೊ, ಇವರು 1 & 2ನೇ ಪ್ರತಿವಾದಿಗಳಾದ ಶ್ರೀ ಜೆಸ್ಸಾರ್ ಹೋಗಾರ್ಡ್, ಶ್ರೀಮತಿ ಸಬ್ರೀನ ಪ್ಲೋರಾಬ್ರಿಟ್ಟೊ, ಮೆ: ಸರೀನ ಸ್ಟೆ ಮೌಂಟ್ ಪ್ಲೆಸೆಂಟ್ ಟ್ರೈನಿಂಗ್ ಕೋ–ಆರ್ಡಿನೇಟರ್ ಇವರಲ್ಲಿ ಕೆಲಸಗಾರರಾಗಿದ್ದು ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ:18.05.2007 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಮು ಅರ್ಜಿ/ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಡಿ.ಜಿ. ನಾಗೇಶ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ದಕ್ಷಿಣ ಕನ್ನಡ ಉಪವಿಭಾಗ–1, ಮಂಗಳೂರು.

ಪಿ.ಆರ್.962

**ನಗರಾಭಿವೃದ್ಧಿ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ನಅಇ 831 ಮೈಅಪ್ರಾ 2008, ಬೆಂಗಳೂರು, ದಿನಾಂಕ:30ನೇ ಜುಲೈ, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 831 ಮೈಅಪ್ರಾ 2008, ದಿನಾಂಕ:17.07.2009ರಲ್ಲಿನ ಅನುಸೂಚಿ ಭಾಗದಲ್ಲಿ "ಗ್ರಾಮ:ಬೋಗಾದಿ" ಎಂದು ನಮೂದಿಸಿರುವುದಕ್ಕೆ ಬದಲಾಗಿ "ಗ್ರಾಮ:ಮಳಲವಾಡಿ" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.964

**ಕರ್ನಾಟಕ ಸರ್ಕಾರದ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ ಬಳ್ಳಾರಿ ನಡವಳಿಗಳು**

**ವಿಷಯ:** ಶ್ರೀ ಹೆಚ್.ಮಹ್ಮದ್ ರಫಿಕ್ ಗ್ರೂಪ್ ಡಿ ನೌಕರರು (ಅಮಾನತ್ತಿನಲ್ಲಿರುವ) ಸರ್ಕಾರಿ ಸಂಯುಕ್ತ ಪ್ರೌಢಶಾಲೆ ಎಸ್.ಆರ್. ಕಾಲೋನಿ, ಬಳ್ಳಾರಿ ಇವರ ಮೇಲಿನ ಆರೋಪಗಳಿಗೆ ಶಿಸ್ತು ಕ್ರಮ ಜರುಗಿಸಿ ಹೊರಡಿಸಿದ ಅಂತಿಮ ಆದೇಶ.

**ಉಲ್ಲೇಖ:**1) ಮುಖ್ಯಗುರುಗಳು ಸರ್ಕಾರಿ ಪ್ರೌಢಶಾಲೆ ಎಸ್.ಆರ್. ಕಾಲೋನಿ ಬಳ್ಳಾರಿ ಇವರ ಪತ್ರ ದಿನಾಂಕ: 22.01.2007 ಮತ್ತು 17.02.2007.

2) ಈ ಕಛೇರಿಯ ಪತ್ರ ಸಮಸಂಖ್ಯೆ ದಿನಾಂಕ:05.03.2007.
3) ಸದ್ರಿ ಶಾಲಾ ಮುಖ್ಯಗುರುಗಳ ವರದಿ ದಿನಾಂಕ:11.09.2007, 12.06.2008, 19.07.2008.
4) ಈ ಕಛೇರಿಯ ಪತ್ರ ಸಮಸಂಖ್ಯೆ ದಿನಾಂಕ:22.09.2008 (ಪತ್ರಿಕಾ ಪ್ರಕಟಣೆಗಾಗಿ ನೀಡಿದ ವರದಿ).
5) ದಿನಾಂಕ:26.09.2008ರಂದು ಈ ನಮ್ಮ ಕನ್ನಡ ದಿನ ಪತ್ರಿಕೆಯಲ್ಲಿ ನೀಡಿದ ಪ್ರಕಟಣೆಯ ಆಧಾರದ ಮೇರೆಗೆ.
6) ಸದ್ರಿ ಶಾಲಾ ಮುಖ್ಯಗುರುಗಳ ವರದಿ 3/12/2008 ಹಾಗೂ 07.01/2009.
7) ಶ್ರೀ ಆರ್. ಪುಟ್ಟಯ್ಯ ಈ ಕಛೇರಿಯ ವಿಷಯ ಪರಿವೀಕ್ಷಕರು ದಿನಾಂಕ:05.05.2009ರಂದು ಸಲ್ಲಿಸಿದ ವಿಚಾರಣಾ ವರದಿ.
8) ಈ ಕಛೇರಿಯ ಪತ್ರ ಸಮಸಂಖ್ಯೆ ದಿನಾಂಕ:23.06.2009 (ಅಂತಿಮ ನೋಟಿಸ್)
9) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸೇಇವಿ 99 ದಿನಾಂಕ:31.01.1989.

**ಪ್ರಸ್ತಾವನೆ:**

ಸರ್ಕಾರಿ ಪ್ರೌಢಶಾಲೆ ಎಸ್.ಆರ್. ಕಾಲೋನಿ, ಬಳ್ಳಾರಿ ಇಲ್ಲಿ **"ಡಿ"** ಗುಂಪಿನ ನೌಕರರಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಹೆಚ್. ಮಹಮ್ಮದ್ ರಫಿ ಆದ ಇವರು ಸುಮಾರು 1992ನೇ ಸಾಲಿನಿಂದ ಸದ್ರಿ ಶಾಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದು ಪದೇ ಪದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗುತ್ತಿರುವುದರಿಂದ ಶಾಲಾ ಕೆಲಸಕ್ಕೆ ತೊಂದರೆ ಆಗುತ್ತಿರುವುದಾಗಿ, ಈ ಕುರಿತು ನೌಕರರಿಗೆ ಸಾಕಷ್ಟು ಕಾರಣ ಕೇಳುವ ನೋಟೀಸ್‌ನ್ನು ಜಾರಿಗೊಳಿಸಿದ್ದರೂ, ಯಾವುದೇ ಹೇಳಿಕೆಯನ್ನು ನೀಡಿರುವುದಿಲ್ಲವೆಂದು ಹಾಗೂ ರಜೆ ಮಂಜೂರಾತಿಯನ್ನಾಗಲೀ, ಪೂರ್ವಾನುಮತಿಯನ್ನಾಗಲಿ ಪಡೆಯದೇ ದಿನಾಂಕ:26.11.2006 ರಿಂದ ಸತತವಾಗಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿರುವುದರಿಂದ ಶಿಸ್ತು ಕ್ರಮ ಜರುಗಿಸುವಂತೆ ಶಾಲಾ ಮುಖ್ಯೋಪಾಧ್ಯಾಯರು ಉಲ್ಲೇಖಿತ (1)ರ ಪತ್ರದ ಮೂಲಕ ಈ ಕಛೇರಿಗೆ ವರದಿ ಮಾಡುತ್ತಾ, ಶಾಲಾ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದ್ರಿಯವರ ಬದಲಿ ಬೇರೆ **"ಡಿ"** ಗುಂಪಿನ ನೌಕರರನ್ನು ನೇಮಿಸುವಂತೆಯೂ ಕೋರಿರುತ್ತಾರೆ, ಸದರಿ ಶಾಲಾ ಮುಖ್ಯಸ್ಥರ ವರದಿಯ ಮೇರೆಗೆ, ಶ್ರೀ ಹೆಚ್. ಮಹಮ್ಮದ್ ರಫಿ, ಗ್ರೂಪ್ **"ಡಿ"** ನೌಕರನ ಈ ಕರ್ತವ್ಯ ಲೋಪವು ತೀವ್ರತರನಾದ ದುರ್ವರ್ತನೆಯಾಗಿರುವುದರಿಂದ, ಅವರ ಮೇಲಿನ ಆರೋಪಗಳಿಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಉಲ್ಲೇಖಿತ (2)ರ ಪತ್ರದ ಮೂಲಕ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಆದೇಶ ಜಾರಿಗೊಳಿಸಲಾಗಿತ್ತು.

ಸದರಿ ಅಮಾನತ್ತಿನ ಆದೇಶವನ್ನು ನೊಂದಣಿ ಅಂಚೆಯ ಮೂಲಕ ಖಾಯಂ ಮನೆಯ ವಿಳಾಸಕ್ಕೆ ರವಾನಿಸಲಾಗಿತ್ತು. ಆದರೆ ನೌಕರರು ಕೇಂದ್ರಸ್ಥಾನದಲ್ಲಿ ಇಲ್ಲದಿರುವುದರಿಂದ ಅಂಚೆ ಷರಾದೊಂದಿಗೆ ವಾಪಾಸಾದ ಕಾರಣ, ಆದೇಶದ ಪ್ರತಿಯನ್ನು ನೌಕರರು ವಾಸಮಾಡುತ್ತಿದ್ದ ಮನೆಯ ಗೋಡೆಗೆ ಅಂಟಿಸಿ ಭಾವ ಚಿತ್ರವನ್ನು ತೆಗೆಯಿಸಿ ಅಕ್ಕಪಕ್ಕದ ಮನೆಯವರ ಸಾಕ್ಷಿಗಾಗಿ ಸಹಿ ಪಡೆಯಲಾಗಿದೆ ಎಂದು ಉಲ್ಲೇಖಿತ (3)ರನ್ವಯ ಶಾಲಾ ಮುಖ್ಯಸ್ಥರು ಈ ಕಛೇರಿಗೆ ಸಲ್ಲಿಸಿರುವ ವರದಿಯನ್ನು ಪರಿಶೀಲಿಸಲಾಗಿ, ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಪ್ರಾಧಿಕಾರಿಯ ಅನುಮತಿಯಿಲ್ಲದೇ ಕೇಂದ್ರಸ್ಥಾನದಲ್ಲಿರದೇ ನಾಪತ್ತೆಯಾಗಿರುವ ಶ್ರೀ ಹೆಚ್. ಮಹಮ್ಮದ್ ರಫಿ ಇವರು ಕೇಂದ್ರ ಸ್ಥಾನದಿಂದ ನಾಪತ್ತೆಯಾಗಿ, ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಅನಧಿಕೃತ ಗೈರುಹಾಜರಾಗಿರುವುದರಿಂದ, ಹದಿನೈದು ದಿನದೊಳಗಾಗಿ ಶಾಲಾ ಮುಖ್ಯಸ್ಥರಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಿ, ಇಲ್ಲದಿದ್ದಲ್ಲಿ ಕೆ.ಸಿ.ಎಸ್.ಆರ್. ನಿಯಮ 108ರಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಲಾಗುವುದೆಂದು ಉಲ್ಲೇಖಿತ (4) ಮತ್ತು (5)ರ ಪ್ರಕಾರ ದಿನಾಂಕ:26.09.2008ರಂದು ಈ ನಮ್ಮ ಕನ್ನಡ ದಿನಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆಯನ್ನು ನೀಡಲಾಗಿತ್ತು. ಈ ರೀತಿ ಪ್ರಕಟಣೆ ನೀಡಿದಾಗ್ಯೂ ಸದರಿ ನೌಕರರು ಈವರೆಗೂ ವರದಿ ಮಾಡಿಕೊಳ್ಳದೇ ಇರುವುದರಿಂದ, ಕೆ.ಸಿ.ಎಸ್.ಆರ್. ನಿಯಮ 108ರನ್ವಯ, 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಅಪೀಲು) ನಿಯಮಾವಳಿಗಳಡಿಯಲ್ಲಿ ಸೇವೆಯಿಂದ ವಜಾಗೊಳಿಸುವ ಪೂರ್ವದಲ್ಲಿ, ಅವರ ಮೇಲಿನ ಆರೋಪಗಳಿಗೆ ಸತ್ಯಾ ಸತ್ಯತೆಯನ್ನು ತಿಳಿಯಲು ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲು ನಿರ್ಧರಿಸಿ, 1957ರ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಅಪೀಲು) ನಿಯಮ 11(2)ರಂತೆ ಈ ಕಛೇರಿಯ ವಿಷಯ ಪರಿವೀಕ್ಷಕರಾದ ಶ್ರೀ ಆರ್.ಪುಟ್ಟಯ್ಯ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ನಿಯಮ 11(5)(ಸಿ) ರನ್ವಯ ಈ ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರಾದ ಶ್ರೀ ಜಿ.ಶಿವರುದ್ರಪ್ಪ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಅದರಂತೆ ವಿಚಾರಣಾಧಿಕಾರಿಗಳು ದಿನಾಂಕ:30.04.2009ರಂದು ಸರ್ಕಾರಿ ಸಂಯುಕ್ತ ಪ್ರೌಢಶಾಲೆ ಎಸ್.ಆರ್. ಕಾಲೋನಿ, ಬಳ್ಳಾರಿಯಲ್ಲಿ ಅವರ ಮೇಲಿನ ಆರೋಪಗಳಿಗೆ ನಿಯಮಾನುಸಾರ ವಿಚಾರಣೆಯನ್ನು ಕೈಗೊಂಡಿದ್ದು, ವಿಚಾರಣೆಗೆ ಸಾಕ್ಷಿದಾರರು ಹಾಜರಾಗಿದ್ದು, ಆಪಾದಿತ ನೌಕರರು ಹಾಜರಾಗಿರುವುದಿಲ್ಲ. ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿದ ಸಮಯದಲ್ಲಿ ಆರೋಪಿತರು ವಿಚಾರಣೆಗೆ ಹಾಜರಾಗದ ಕಾರಣ, ಏಕ ಪಕ್ಷೀಯವಾಗಿ ಕ್ರಮಕೈಗೊಂಡು ಸಾಕ್ಷ್ಯ ದಾಖಲೆಗಳ ಆಧಾರದ ಮೇಲೆ, ಅಮಾನತ್ತಿನಲ್ಲಿರುವ ನೌಕರರು ಕಾರಣ ನೀಡದೇ ಸಕ್ಷಮ ಪ್ರಾಧಿಕಾರಿಯ ಪೂರ್ವಾನುಮತಿ ಪಡೆಯದೇ ಕೇಂದ್ರಸ್ಥಾನದಲ್ಲಿರದೇ ವಿಚಾರಣೆಗೂ ಹಾಜರಾಗದೇ ನಾಪತ್ತೆಯಾಗಿರುವುದು ಉಲ್ಲೇಖಿತ (7)ರ ಮೂಲಕ ಸಲ್ಲಿಸಿದ ವರದಿಯಲ್ಲಿ ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿ ನೌಕರರಿಗೆ ಉಲ್ಲೇಖಿತ (8)ರ ಪ್ರಕಾರ ಈ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಒಂದು ವಾರದೊಳಗಾಗಿ ವಿವರಣೆ ಸಲ್ಲಿಸುವಂತೆ ಸೂಚಿಸಿ, ಅಂತಿಮ ನೋಟಿಸ್‌ನ್ನು ನೊಂದಣಿ ಅಂಚೆಯ (ಎ.ಡಿ.ಎಲ್.ಆರ್.) ಮೂಲಕ ಜಾರಿಗೊಳಿಸಲಾಗಿತ್ತು. ಆದಾಗ್ಯೂ ಆಪಾದಿತ ನೌಕರರಿಂದ ಯಾವುದೇ ಉತ್ತರವು ಈ ಕಛೇರಿಯಲ್ಲಿ ಸ್ವೀಕೃತಗೊಳ್ಳದೇ, ಜಾರಿಗೊಳಿಸದ ಅಂತಿಮ ನೋಟಿಸ್‌ನ ಲಕೋಟೆಯು ವಾಸ ಸ್ಥಳದಲ್ಲಿ ಇಲ್ಲದಿರುವುದರಿಂದ ಅಂಚೆ ಕಛೇರಿಯಿಂದ ಷರಾದೊಂದಿಗೆ ವಾಪಾಸಾಗಿರುತ್ತದೆ.

ಆದ್ದರಿಂದ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಹಾಗೂ ದಾಖಲಾತಿಗಳೊಂದಿಗೆ ಕೂಲಂಕುಷವಾಗಿ ಪರಿಶೀಲಿಸಲಾಗಿ ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ, ವಿಚಾರಣೆಗೂ ಹಾಜರಾಗದೆ, ತಿಳುವಳಿಕೆ ಪತ್ರಕ್ಕೆ ಸ್ಪಂದಿಸದೆ, ದಿನಾಂಕ:26.11.2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿ, ಕೇಂದ್ರ ಸ್ಥಾನದಲ್ಲಿರದೇ ನಾಪತ್ತೆಯಾಗಿರುವುದು ನಿಸ್ಸಂಶಯವಾಗಿ ಇಲಾಖಾ ವಿಚಾರಣೆಯಿಂದ ರುಜುವಾತಾಗಿರುವುದರಿಂದ, ಸದರಿ ಆಪಾದಿತ ನೌಕರರು ಸರ್ಕಾರಿ ಕೆಲಸ ನಿರ್ವಹಿಸುವಲ್ಲಿ ಯಾವುದೇ ಶ್ರದ್ಧೆ, ಆಸಕ್ತಿ ಇಲ್ಲದಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ ಉಲ್ಲೇಖಿತ (9)ರ ಸರ್ಕಾರಿ ಆದೇಶದ ಪ್ರಕಾರವಾಗಿ, ಸದರಿ ನೌಕರರನ್ನು 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಅಪೀಲು) ನಿಯಮಾವಳಿಗಳ ನಿಯಮ 8(viii) ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ಕಠಿಣ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಹೊರಡಿಸಿದ ಈ ಆದೇಶ.

**ಆದೇಶ**

**ಸಂಖ್ಯೆ: ಇ4/ಸಿಬ್ಬಂದಿ/ದೂರು/99/2006-07, ದಿನಾಂಕ:4ನೇ ಜುಲೈ, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಪರಿಗಣಿಸಿ, ಶ್ರೀ ಹೆಚ್. ಮಹ್ಮದ್ ರಫಿಕ್ ಗ್ರೂಪ್ **"ಡಿ"** ನೌಕರರು (ಅಮಾನತ್ತಿನಲ್ಲಿರುವ) ಸರ್ಕಾರಿ ಸಂಯುಕ್ತ ಪ್ರೌಢಶಾಲೆ ಎಸ್.ಆರ್. ಕಾಲೋನಿ ಬಳ್ಳಾರಿ ಇವರ ಮೇಲಿನ ಆರೋಪಗಳಿಗೆ, ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಹಾಗೂ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿ, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ, ವಿಚಾರಣೆಗೂ ಹಾಜರಾಗದೆ, ತಿಳುವಳಿಕೆ ಪತ್ರಕ್ಕೆ ಸ್ಪಂದಿಸದೆ, ದಿನಾಂಕ:26.11.2006 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿಯಾಗಿ, ಕೇಂದ್ರ ಸ್ಥಾನದಲ್ಲಿರದೇ ನಾಪತ್ತೆಯಾಗಿರುವುದು ನಿಸ್ಸಂಶಯವಾಗಿ ಇಲಾಖಾ ವಿಚಾರಣೆಯಿಂದ ರುಜುವಾತಾಗಿರುವುದರಿಂದ, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 108 ಅನ್ನು ಆಕರ್ಷಿಸಿರುವ ಹಿನ್ನೆಲೆಯಲ್ಲಿ ಆಪಾದಿತ ನೌಕರರು ಗಂಭೀರವಾದ ಕರ್ತವ್ಯ ಲೋಪ ಹಾಗೂ ದುರ್ವರ್ತನೆ ಎಸಗಿದಂತಾಗಿರುತ್ತದೆ.

ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ನಿಯಮ 108ರನ್ವಯ ಸರ್ಕಾರವು ಪ್ರಕರಣದ ವಿಶೇಷ ಸಂದರ್ಭಗಳಿಂದಾಗಿ ಅನ್ಯಥಾ ನಿರ್ಣಯಿಸದ ಹೊರತು 4 ತಿಂಗಳು ಹಾಗೂ ಹೆಚ್ಚಿನ ಅವಧಿಗೆ ರಜೆ ಪಡೆದುಕೊಳ್ಳದೇ ಕರ್ತವ್ಯಕ್ಕೆ ಗೈರು ಹಾಜರಾಗುವ ಸರ್ಕಾರಿ ನೌಕರರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ 1957ರಲ್ಲಿ ನಮೂದಿಸಲಾದ ಕಾರ್ಯವಿಧಾನವನ್ನನುಸರಿಸಿ, ಸೇವೆಯಿಂದ ವಜಾ ಮಾಡಬಹುದಾಗಿರುತ್ತದೆ ಅಥವಾ ಸೇವೆಯಿಂದ ತೆಗೆದು ಹಾಕಬಹುದಾಗಿರುತ್ತದೆ. ಈ ಪ್ರಕರಣದಲ್ಲಿ ಆರೋಪಿತ ನೌಕರರು ಯಾವುದೇ ಪ್ರಬಲವಾದ ಕಾರಣವಿಲ್ಲದೇ, ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೇ ಹಾಗೂ ವಿಚಾರಣೆಗೂ ಹಾಜರಾಗದೇ, ಸರ್ಕಾರಿ ಕೆಲಸಕ್ಕೆ ದಿನಾಂಕ:26.11.2006 ರಿಂದ ಅನಧೀಕೃತವಾಗಿ ಗೈರುಹಾಜರಾಗಿರುವುದು ತೀವ್ರತೆರನಾದ ದುರ್ವರ್ತನೆ ಆಗಿರುವುದರಿಂದ, ಅವರ ವಿರುದ್ಧ ಮಾಡಲಾಗಿರುವ ಆರೋಪವು ಸಾಬೀತಾಗಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಅಪೀಲು) ನಿಯಮಾವಳಿಗಳ ನಿಯಮ 8(viii) ರೊಂದಿಗೆ ಓದಿಕೊಂಡ ನಿಯಮ 9(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ॥ ಎಚ್. ಬಾಲರಾಜು ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ ಆದ ನಾನು ಶ್ರೀ ಹೆಚ್. ಮಹ್ಮದ್ ರಫಿಕ್ ಗ್ರೂಪ್ **"ಡಿ"** ನೌಕರರು (ಅಮಾನತ್ತಿನಲ್ಲಿರುವ) ಸರ್ಕಾರಿ ಸಂಯುಕ್ತ ಪ್ರೌಢಶಾಲೆ ಎಸ್.ಆರ್. ಕಾಲೋನಿ, ಬಳ್ಳಾರಿ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಿ ಆದೇಶಿಸಿದ್ದೇನೆ.

**ಡಾ॥ ಎಚ್. ಬಾಲರಾಜು**

ಪಿ.ಆರ್.632

ಶಿಸ್ತು ಪ್ರಾಧಿಕಾರಿ ಹಾಗೂ ಉಪನಿರ್ದೇಶಕರು (ಆಡಳಿತ),
ಸಾರ್ವಜನಿಕ ಶಿಕ್ಷಣ ಇಲಾಖೆ, ಬಳ್ಳಾರಿ.

**ಜಿಲ್ಲಾ ಪಂಚಾಯತ್, ಸಮಾಜ ಕಲ್ಯಾಣ ಇಲಾಖೆ, ಶಿವಮೊಗ್ಗ**

**ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳವರ ಕಛೇರಿ, ಪೃಥ್ವಿ ಮ್ಯಾನ್ಷನ್, 100 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ**

**ಪ್ರಕಟಣೆ**

**ಸಂಖ್ಯೆ: ಜಿಸಕಅ/ಜಿಸಕಅ/ವಿ7/ಸಿಆರ್.21/2009–10, ದಿನಾಂಕ:15ನೇ ಸೆಪ್ಟೆಂಬರ್, 2009**

**ವಿಷಯ:** 2009–10ನೇ ಸಾಲಿಗೆ ಪರಿಶಿಷ್ಟ ಜಾತಿ/ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಎಲ್.68/ಎಸ್‌ಇಡಬ್ಲ್ಯೂ.89/ದಿನಾಂಕ:02.11.1990.

2009–10ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ನಾಲ್ಕು ವರ್ಷಗಳ ತರಬೇತಿಗಾಗಿ ಶಿವಮೊಗ್ಗ ಜಿಲ್ಲೆಯ ಪರಿಶಿಷ್ಟ ವರ್ಗಗಳ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಿಯಾ ಯೋಜನೆಯಲ್ಲಿ ಗುರಿ ನಿಗದಿಪಡಿಸಲಾಗಿದೆ. ಆದ್ದರಿಂದ ಪರಿಶಿಷ್ಟ ಜಾತಿ/ ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿತ ಅರ್ಜಿ ನಮೂನೆಗಳನ್ನು ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಪೃಥ್ವಿ ಮ್ಯಾನ್ಷನ್, ಮೊದಲನೇ ಮಹಡಿ, ವಿನೋಬನಗರ, 100 ಅಡಿ ರಸ್ತೆ, ಶಿವಮೊಗ್ಗ ಇಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು. ಭರ್ತಿ ಮಾಡಿ ಅಗತ್ಯ ದಾಖಲಾತಿಗಳೊಂದಿಗೆ ದಿನಾಂಕ:03.10.2009ರ ಒಳಗೆ ಸಲ್ಲಿಸಬೇಕು. ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಬಂಧನೆಗಳು:**

1) ಅಭ್ಯರ್ಥಿಗಳು ಶಿವಮೊಗ್ಗ ಜಿಲ್ಲೆಯವರಾಗಿದ್ದು ಪರಿಶಿಷ್ಟ ಜಾತಿ/ ವರ್ಗಕ್ಕೆ ಸೇರಿದವರಾಗಿರಬೇಕು.

2) ಕಾನೂನು ಪದವಿಯಲ್ಲಿ ತೇರ್ಗಡೆ ಹೊಂದಿ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳನ್ನು ಮೀರರಬಾರದು.

3) ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 18 ರಿಂದ 35 ವರ್ಷದ ಮಿತಿಯೊಳಗಿರಬೇಕು.

4) ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.

5) ಜಿಲ್ಲಾಮಟ್ಟದ ಆಯ್ಕೆ ಸಮಿತಿಯ ಮೂಲಕ ಸಂದರ್ಶನಕ್ಕೆ ಕರೆದು ಅಭ್ಯರ್ಥಿಗಳನ್ನು ತರಬೇತಿಗಾಗಿ ಆಯ್ಕೆ ಮಾಡಲಾಗುವುದು.

6) ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲಕ್ಕೆ ಕಡಿಮೆ ಇಲ್ಲದಂತೆ ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯವಾದಿಗಳ ಬಳಿ ತರಬೇತಿ ಪಡೆಯಬೇಕು.

7) ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಗಳನ್ನು ಪಡೆದು ಅದನ್ನು ಪರಿಶೀಲಿಸಿ, ಪ್ರತಿ ಮಾಹೆ ರೂ.1000/– (ಒಂದು ಸಾವಿರ)ಗಳ ದರದಲ್ಲಿ ಮಾತ್ರ ಶಿಷ್ಯ ವೇತನವನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.

8) ಈ ತರಬೇತಿಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಕೊನೆಯ ದಿನಾಂಕದ ಒಳಗೆ ಭರ್ತಿ ಮಾಡಿದ ಅರ್ಜಿಯೊಂದಿಗೆ ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕಪಟ್ಟಿಗಳು, ಜಾತಿ ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್ ಕೌನ್ಸಿಲ್‌ನ ನೊಂದಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ದ್ವಿ ಪ್ರತಿಯಲ್ಲಿ ಅರ್ಜಿ ಸಲ್ಲಿಸಬೇಕು.

9) ಅಭ್ಯರ್ಥಿಯು ಯಾವುದೇ ಸರ್ಕಾರಿ, ಅರೆ ಸರ್ಕಾರಿ ನೌಕರಿಯಲ್ಲಿರಬಾರದು, ವಿದ್ಯಾಭ್ಯಾಸ ಮಾಡುತ್ತಿರಬಾರದು.

10) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ದಾಖಲಾತಿ ನೀಡಿ ಆಯ್ಕೆಯಾಗಿದ್ದು ಕಂಡುಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು ಮತ್ತು ಈ ಸಂಬಂಧವಾಗಿ ಪಡೆದ ಶಿಷ್ಯ ವೇತನವನ್ನು ಬಡ್ಡಿ ಸಮೇತ ಹಿಂದಿರುಗಿಸಬೇಕಾಗುವುದು.

11) ಆಯ್ಕೆಯಾದ ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ಧರಾಗಿರುವ ಬಗ್ಗೆ ತರಬೇತಿ ಅವಧಿಯು ನಾಲ್ಕು ವರ್ಷವಿದ್ದು, ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು ರೂ.20/– ಬೆಲೆಯ ಛಾಪಾ ಕಾಗದದಲ್ಲಿ ಬರೆದುಕೊಡಬೇಕು. ಒಂದು ವೇಳೆ ತರಬೇತಿ ಮಧ್ಯದಲ್ಲಿ ಬಿಟ್ಟರೆ ಅದುವರೆವಿಗೂ ಪಡೆದಿರುವ ಶಿಷ್ಯವೇತನವನ್ನು ವಾರ್ಷಿಕ ಶೇ.10ರ ಬಡ್ಡಿ ದರದಲ್ಲಿ ಸರ್ಕಾರಕ್ಕೆ ಮರು ಪಾವತಿಸಲು ಬದ್ಧರಾಗಿರಬೇಕು. ಇಲ್ಲವಾದಲ್ಲಿ ಭೂ ಕಂದಾಯ ಬಾಕಿ ಕಾಯ್ದೆಯಂತೆ ವಸೂಲಿ ಮಾಡಲಾಗುವುದು.

12) ಅಭ್ಯರ್ಥಿಯು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

13) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಮತ್ತು ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಯು. ಚಂದ್ರಾನಾಯ್ಕ್**

ಪಿ.ಆರ್.959 ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ, ಶಿವಮೊಗ್ಗ ಜಿಲ್ಲೆ.